

ಇಂದು ಎನಗೆ ಗೋವಿಂದ ನಿನ್ನಯ ಪಾದಾರ
ವಿಂದವ ತೋರೋ ಮುಕುಂದನೇ -ಪ-

ಸುಂದರ ವದನನೆ ನಂದ ಗೋಪಿಯ ಕಂದ
ಮಂದರೋದ್ಧರ ಆನಂದ ಇಂದಿರೆ ರಮಣ -ಅ.ಪ-

ನೊಂದೆನಯ್ಯ ಭವ ಬಂಧನದೊಳು ಸಿಲುಕಿ
ಮುಂದೆ ದಾರಿ ಕಾಣದೆ ಕುಂದಿದೆ ಜಗದೊಳು
ಕಂದನೆಂದು ಎನ್ನ ಕುಂದಗಳೆಣಿಸದೆ
ತಂದೆ ಕಾಯೋ ಕೃಷ್ಣ ಕಂದರ್ಪ ಜನಕನೆ -೧-

ಮೂಢತನದಿ ಬಲು ಹೇಡಿ ಜೀವನನಾಗಿ
ದೃಢ ಭಕುತಿಯನು ಮಾಡಲಿಲ್ಲವೊ ಹರಿಯೆ
ನೋಡಲಿಲ್ಲವೊ ನಿನ್ನ ಪಾಡಲಿಲ್ಲವೊ ಮಹಿಮೆ
ಗಾಡಿಕಾರ ಕೃಷ್ಣ ಬೇಡಿಕೊಂಡೆನೊ ನಿನ್ನ -೨-

ಧಾರುಣಿಯೊಳು ಬಲುಭಾರ ಜೀವನನಾಗಿ
ದಾರಿತಪ್ಪಿ ನಡೆದೆ ಸೇರಿದೆ ಕುಜನರ
ಆರೂ ಕಾಯುವರಿಲ್ಲ ಸೇರಿದೆ ನಿನಗಯ್ಯ
ಧೀರ ವೇಣುಗೋಪಾಲ ಪಾರುಗಾಣಿಸೊ ಹರಿಯೆ -೩-

--ಶ್ರೀ ರಾಘವೇಂದ್ರಸ್ವಾಮಿಗಳು.

ಸಂದರ್ಶಿಸಿ. ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲೆ



# ವಾರ್ಷಿಕ ಬ್ರಹ್ಮೋತ್ಸವಗಳು

25--9--95 ರಿಂದ 4--10--95 ವರೆಗೆ

**ಕಾರ್ಯಕ್ರಮ ವಿವರ**

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 25--9--95 | ಸೋಮವಾರ | ---- | ಸೇನಾಪತಿ ಉತ್ಸವ, ಅಂಕುರಾರ್ಪಣೆ. |
| 26--9--95 | ಮಂಗಳವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ. |
| 27--9--95 | ಬುಧವಾರ | ಚಿಕ್ಕ ಶೇಷವಾಹನ. | ಹಂಸವಾಹನ. |
| 28--9--95 | ಗುರುವಾರ | ಸಿಂಹವಾಹನ | ಮುತ್ತಿನ ಚಪ್ಪರ ವಾಹನ. |
| 29--9--95 | ಶುಕ್ರವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 30--9--95 | ಶನಿವಾರ | ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ | ಗರುಡವಾಹನ. |
| 1--10--95 | ಭಾನುವಾರ | ಹನುಮಂತ ವಾಹನ<br>ಸಂಜೆ -- ವಸಂತೋತ್ಸವ | ಗಜವಾಹನ. |
| 2--10--95 | ಸೋಮವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 3--10--95 | ಮಂಗಳವಾರ | ರಥೋತ್ಸವ | ಅಶ್ವವಾಹನ. |
| 4--10--95 | ಬುಧವಾರ | ತೀರ್ಥವಾರಿ, ಚಕ್ರಸ್ನಾನ | ಧ್ವಜಾವರೋಹಣ. |

ಸೂಚನೆ :ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಹೆಚ್ಚಿನ ಸಂದಣಿಯ ಸೌಲಭ್ಯಗಳನ್ನು ಗಮನಿಸಲು ಪ್ರತ್ಯೇಕ ಸಿಬ್ಬಂದಿಯನ್ನೂ, ಹೆಚ್ಚಿನ ಬಸ್ ಸೌಕರ್ಯವನ್ನೂ ಏರ್ಪಡಿಸಲಾಗುತ್ತದೆ.

**ನೀವೂ ಬನ್ನಿ** **ತಿ. ತಿ. ದೇ.** **ನಿಮ್ಮವರನ್ನೂ ಕರೆತನ್ನಿ**



ಗೌರವ ಸಂಪಾದಕರು :
ಶ್ರೀ ಎನ್. ರಮೇಶ್‌ಕುಮಾರ್, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
ಎನ್.ಎಸ್. ರಾಮಮೂರ್ತಿ, ಎಂ.ಎ.

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಪಿ. ಮೋಹನ್‌ರಾವ್

ಲೇಖನ/ಜಾಹೀರಾತುಗಳಿಗೆ
ಮಿಕ್ಕವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ||

ಸಂಪುಟ -- 26 ಆಗಸ್ಟ್ 1995 ಸಂಚಿಕೆ -- 3

# ವಿಷಯಸೂಚಿ






ಕೃಷ್ಣಂ ವಂದೇ ಜಗದ್ಗುರುಂ ಎಂದರು. ಆತನನ್ನು ದೇವರೇ ಎಂದು ಭಾರತದಾದ್ಯಂತ ಪೂಜಿಸಲಾಗುತ್ತಿದೆ. ಯುಗಗಳುರುಳಿ, ಬಾನ ಬೆಜ್ಜದ ಕೆಳಗೆಷ್ಟು ನೀಲನಗರಾವಳಿಗಳಾಗಿ ಹೋದರೂ ನೀಲಮೇಘಶ್ಯಾಮನ ನರನಾಟಕ ಸೂತ್ರಧಾರಿತನ ಮಾತ್ರ ಸ್ವಲ್ಪವೂ ಕುಂದಿಲ್ಲದಂತೆ ಒಂದೇ ತೆರನಾಗಿ ಗುರುತಿಸಲ್ಪಡುತ್ತಿದೆ ಎಂದರೆ ಆತ ನಿರ್ವಹಿಸಿದ ಆ ಪಾತ್ರದ ಅಂತಃ ಸತ್ವವೇ ಕಾರಣವಾಗಿರಬೇಕು.

ಆರ್ಯಾವರ್ತದಲ್ಲಿ - ಭಾರತದಲ್ಲಿ, ಜಗತ್ತಿನಲ್ಲಿ - ಧರ್ಮವನ್ನು ಸ್ಥಾಪಿಸುವುದೇ ನನ್ನ ಜೀವನ ಧ್ಯೇಯ ಎಂದು ಹೊರಟವನು ಆತ. ದೇವರೇ ಆಗಿರಲೊಲ್ಲನೇಕೆ ಅಥವಾ ಮನುಷ್ಯನಾದರೂ ಆಗಿರಬಾರದೇಕೆ! ಒಂದು ಆದರ್ಶ - ಒಂದು ಗುರಿ - ಅದಕ್ಕಾಗಿ ತನ್ನ ತಾನು ಸಮರ್ಪಿಸಿಕೊಂಡವನಾಗಿ, ಅಹರ್ನಿಶಿ ದುಡಿದ ಎಂದರೆ ಅದು ಆತನನ್ನು ಹಾಗೊಮ್ಮೆ ಮನುಷ್ಯ ಮಾತ್ರನೇ ಆಗಿದ್ದರೂ ದೈವದ ಮಟ್ಟಕ್ಕೆ ಏರಿಸುತ್ತದೆ. ಹಾಗಾಗಿ ಶ್ರೀಕೃಷ್ಣ ದೇವರೇ ಆಗುತ್ತಾನೆ.

ಮುಖ್ಯವಾದದ್ದು ಅವನ ಪಾತ್ರವಲ್ಲ. ನಮ್ಮ ನೇತ್ರ. ಒಲಿದವರನುಜ್ಜೀವಿಸುವ ಬಗೆ ಬಲುಹು ಮುರಹರನದು, ಓವಿ ಬಂದರೆ ತನ್ನ ಬೀರುವ ದೇವ ಆತ. ಇದು ಕವಿ ಕುಮಾರವ್ಯಾಸ ಕಂಡ ಬಗೆ. ನಮ್ಮ ಬಗೆಗಣ್ಣೂ ಅದನ್ನು ಕಾಣುವಂತಾಗಬೇಕು ಎಂಬುದೇ ಆಶಯ.

ಒಂದು ಅಪವಾದವನ್ನೂ ಗುರುತಿಸುತ್ತಾರೆ. ಆತನ ಕಾಲದಲ್ಲಿಯೇ ಆತನನ್ನು ಅಪನಂಬಿಕೆಯಿಂದ, ಅನುಮಾನದಿಂದ ನೋಡಿದವರ ಸಂಖ್ಯೆ ಕಡಮೆಯದೇನಲ್ಲ. ಜರಾಸಂಧ, ಶಿಶುಪಾಲರಿಗೆ ಆತ ವಂಚಕ ಶಿಖಾಮಣಿ, ಕೈತವದ ಶಿಕ್ಷಾಗುರುವಿನಂತೆ (ದುರ್ಯೋಧನ) ಕಂಡುಬಂದರೆ ಪೌಂಡ್ರಕನಿಗೆ ನಕಲು ಮಾಡುವ ಆದರ್ಶವಾದ. ಕಂಸನಿಗಂತೂ ಹುಟ್ಟುವ ಮೊದಲೇ ಶತ್ರುವಾದ 'ಠಕ್ಕಿನ ಕಡಲು ಕೃಷ್ಣನ ನಂಬಲಿಹಪರವಿಲ್ಲ'ವೆನ್ನುವ ಭೂರಿಶ್ರವ -- ಹೀಗೆ ಹಲವು ಮಂದಿ ಆತನಿಗಿಂತ ಬೇರೆಯಾಗಿ ಯೋಚಿಸುವ ಜನ ಅಂದೂ ಇದ್ದರು ಎಂಬುದರಿಂದಲೇ ಆತನ ಆದರ್ಶದ ಅವಗಾಹನೆ ಇತರರಿಗೆ ಇರಲಿಲ್ಲವೆಂದು ಹೇಳಬೇಕಾಗುತ್ತದೆ. ಅಷ್ಟರ ಮಟ್ಟಿಗೆ ಅವರಿಗೆ ತಿಳಿಯದ ಧರ್ಮಮಾರ್ಗ ಈತನಿಗೆ ಮಾತ್ರ ಕಾಣಿಸಿತೇ ಎಂದೂ ಕೊರಲೆತ್ತಲು ಅವಕಾಶವುಂಟು. ಆದರೆ ಇಂತಹವರೆಲ್ಲ ಇದ್ದಿದ್ದರಿಂದಲೇ ಆತನಿಗೆ ಆದರ್ಶವನ್ನು ಹಿಡಿದು ನಡೆಯಲು ಪ್ರೇರಣೆ ದೊರೆತಿರಬಹುದು ಅಥವಾ ಇವರೆಲ್ಲರ ವಿರುದ್ಧವಾದ ಧರ್ಮ ಒಂದು ಇದೆ ಎಂದು ಸಾರಿ ಹೇಳುವ ಅಗತ್ಯವುಂಟಾಗಿರಬೇಕು ಎನ್ನಲು ಅಡ್ಡಿಯಿಲ್ಲ.

ಇನ್ನೊಂದು ಹಂತದಲ್ಲಿ ನೋಡಿದರೆ ಗೀತಾಚಾರ್ಯನ ಅಂತರಂಗ ದರ್ಶನ ಮಾಡಿದಂತಾಗುತ್ತದೆ. ಅದು ದುರ್ಯೋಧನನ ದೃಷ್ಟಿಕೋನ. 'ಎನ್ನ ಮನದೊಳಗಿದ್ದು ಮುರಿವನು ಸಂಧಿಯನು - ಕೈದಣಿಯೆ ಹೊಯ್ದಾಡುವೆನು ಕೃಷ್ಣನ ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲೆಂದ.' ಅವನಿಗೆ ರಾಯಭಾರ ಪ್ರಸಂಗದಲ್ಲಿಯೇ ಕೃಷ್ಣನ ಅಂತರಂಗ ತಿಳಿದಿದೆ - ಆತನನ್ನು ಕೆಣಕದಿದ್ದರೆ ಬೇಗನೆ ಮೋಕ್ಷ ಸಿಗದಂತೆ. ಅದು ಅವನ ಯುದ್ಧ ಕಾರಣ. ನಾರಣಪ್ಪ - ಎಲ್ಲ ಕಡೆ ಕೃಷ್ಣನ ನರನಾಟಕವನ್ನು ಬಣ್ಣಿಸುವ ಹಂಬಲದಿಂದಾಗಿ ದುರ್ಯೋಧನನಿಂದ ಈ ಮಾತನ್ನು ಆಡಿಸಿರಬೇಕು. ಇದರಲ್ಲಿಯೂ ನಿಜದ ಅಂಶವಿರಬೇಕಲ್ಲ. ಜಯ ವಿಜಯರ ಶಾಪದ ಕಥೆ ಅವರು ದೇವ ವಿರೋಧಿಗಳಾಗಿ ತ್ವರೆಯಾಗಿ ಮೋಕ್ಷ ಪಡೆದ ಕಥೆ - ಈ ಮಾತಿಗೆ ದೆಂಬಲ ನೀಡಬಹುದು. ಆದರೆ ಇದ್ದಲ್ಲಿಯೇ ಕೈವಲ್ಯವನ್ನು ಅನುಭವಿಸುವ ಶಕ್ತರು ವಿದುರ, ಭೀಷ್ಮರೂ ಇದ್ದರಲ್ಲ. ಆತನ ಆಟಗಳನ್ನು ನೋಡುತ್ತ ಮುಗುಳ್ನಗುತ್ತ ಇದ್ದರಲ್ಲ ಎಂಬುದನ್ನೂ ಮರೆಯುವಂತಿಲ್ಲ. 'ಕೂದಲು ಹರಿದುದಾದರೆ ಬಳಿಕ ನಾ ಡಿಂಗರಿಗನಲ್ಲ' ಎಂದು ನಗುತ್ತಲೇ ಚಕ್ರಿಯನ್ನು ಗಾಯಗೊಳಿಸಿ ಸವಾಲೆಸೆವ ಭೀಷ್ಮರ ದೃಷ್ಟಿ ಕೋನವೂ ಇದೆ. ಜೊತೆಗೇ ಹೊರಗೆ ಫಲುಗುಣನ ರಥಾಗ್ರಭಾಗದಲಿ ಒಳಗೆ ಹೃದಯ ಕಮಲದ ಮಧ್ಯದಲಿ ಹರಿಯ ಕಾಣುತ 'ಹೊರಗೊಳಗೆ ಹರಿ ತಾನೆಂಬ ಭೇದವ ತಿಳಿದು' ನಸುನಗುತ್ತ ಪ್ರಾಣ ಬಿಟ್ಟ ಕರ್ಣನ ಕಣ್ಣೂ ನಾರಣಪ್ಪನಿಂದಲೇ ಚಿತ್ರಿತವಾಗಿದೆ.

ಇಷ್ಟೆಲ್ಲ ಇದ್ದ ಮೇಲೆ ಆತನನ್ನು ಎಲ್ಲೆಡೆ ಕಾಣಲು ನಾವೂ ಪ್ರಯತ್ನ ಪಡುವುದರಲ್ಲಿ ನಷ್ಟವೇನಿಲ್ಲ. ಅದಕ್ಕೆ ಒಂದು ತೆರನಾದ ಸಂಸ್ಕಾರ ಬೇಕು. ಸಾಧನೆ ಬೇಕು. ಭಾಗವತದ ಅಕ್ರೂರ, ಉದ್ಧವ, ಭಾರತದ ಅರ್ಜುನ, ಭೀಮರಿಗೆ ಅಂತಹ ಸಾಧನಾ ಶಕ್ತಿ ಇದ್ದಿತೆಂದು ಹೇಳಬೇಕಾಗುತ್ತದೆ. ಒಂದು ಪ್ರಯತ್ನ - ಒಂದು ಹಂಬಲ ಇದ್ದರೆ ಆತನೂ ನೆರವಿಗೆ ಬರಬಲ್ಲ - ಬಂದೇ ಬರುತ್ತಾನೆ. ಎಂಬುದನ್ನೇ ಈ ಪಾತ್ರಗಳೂ ಪ್ರತಿಮಿಸುತ್ತವೆಯಾಗಿ, ಅವನನ್ನು ತಿಳಿಯುವ ಹಾದಿಯಲ್ಲಿ ಸಾಗುವ ಪ್ರಯತ್ನ ಪಡುವ. ಶ್ರೀ ವೆಂಕಟೇಶ್ವರಸ್ವಾಮಿಯನ್ನು ಕೈಹಿಡಿದು ನಡೆಸೆನ್ನನು ಎಂದು ಜನ್ಮಾಷ್ಟಮಿಯ ಶುಭ ಸಂದರ್ಭದಲ್ಲಿ ಬೇಡುವ.

# ಸಂಗೀತದಲ್ಲಿ ಗಣಪತಿ

---ಎಂ. ಸಿ. ನರಸಿಂಹನ್.

ಶುಕ್ಲಾಂಬರಧರಂ ವಿಷ್ಣುಂ
ಶಶಿವರ್ಣಂ ಚತುರ್ಭುಜಂ
ಪ್ರಸನ್ನವದನಂ ಧ್ಯಾಯೇತ್
ಸರ್ವ ವಿಘ್ನೋಪ ಶಾಂತಯೇ

('ವಿಷ್ಣು' ಎಂದರೆ ಎಲ್ಲೆಲ್ಲೂ ಹರಡಿಕೊಂಡಿರುವವನು ಎಂದೂ ಅರ್ಥ.)

ಯಸ್ಯದ್ವಿರದ ವಕ್ತ್ರಾದ್ಯಾಃ
ಪಾರಿಷದ್ಯಾಃ ಪರಶ್ಶತಮ್
ವಿಘ್ನಂ ನಿಘ್ನಂತಿ ಸತತಂ
ವಿಷ್ವಕ್ಸೇನಂ ತಮಾಶ್ರಯೇ

[ನಿತ್ಯಸೂರಿಗಳಲ್ಲಿ ಒಬ್ಬರಾದ ಗಜಾನನರು ಆನೆ ಮುಖದವರು. ಅವರು ಹಾಗೂ ಅಂತಹ ನೂರಾರು ನಿತ್ಯಸೂರಿಗಳು ಸದಾ ನಮ್ಮ ಕಾರ್ಯಗಳಿಗೆ ಬರಬಹುದಾದ ತೊಡರುಗಳನ್ನು ನಿವಾರಿಸಿ ಶುಭವನ್ನುಂಟುಮಾಡುವವರು. ಇವರು ವಿಷ್ವಕ್ಸೇನರ ಸೇನೆಯಲ್ಲಿ ಇದ್ದಾರೆ. ಅಂಥಹ ವಿಷ್ವಕ್ಸೇನರೆಂಬ ಶ್ರೀ ವೈಷ್ಣವ ಸೇನಾಪತಿಗೆ ನಮನ.]

ನಮ್ಮಗಣಪತಿ, ವಿಘ್ನೇಶ್ವರ, ವಿಘ್ನನಿವಾರಕ. ಸಜ್ಜನರು ಕೈಗೊಂಡ ಕೆಲಸಗಳನ್ನು ತೊಂದರೆ ಇಲ್ಲದೆ ಮುಗಿಸಿಕೊಡುವವ, ಈ ಮುದ್ದುಗಣಪ. ಬಂದ ತೊಂದರೆ ನಿವಾರಿಸಿ ಮುಂದೆ ಬರಬಹುದಾದ ಅಡಚಣೆ ಸಹ ನಿವಾರಿಸುವ ಅದ್ಭುತ ಧೀಃಶಕ್ತಿಯೇ ಗಣಪತಿ. ಮುಖ್ಯ ತಾತ್ವಿಕ ದೇವರುಗಳಲ್ಲಿ ಗಣಪತಿ ಆಕಾಶಕ್ಕೆ ಅಭಿಮಾನದೇವತೆ. ಪಂಚಭೂತಗಳಲ್ಲಿ ಅತ್ಯಂತ ಸೂಕ್ಷ್ಮವಾದುದು, ವ್ಯಾಪಕವಾದುದು, ಅವಕಾಶಪ್ರದವಾದುದು ಆಕಾಶ. ವಿಶ್ವನಾಮಕ ಪರಮಾತ್ಮನೇ (ಅನಿರುದ್ಧ) ಗಣಪನಲ್ಲಿದ್ದು ರಕ್ಷಣಾಪ್ರಜ್ಞೆಯ (ಎಚ್ಚರದ) ಎಲ್ಲ ಕೆಲಸಗಳನ್ನೂ ನಡೆಸುವುದರಿಂದ ಇವನನ್ನೇ ವಿಶ್ವ, ವಿಶ್ವಾತ್ಮಕ ಎಂದೂ ಕರೆಯುತ್ತಾರೆ. ಜಾಗ್ರದವಸ್ಥೆಯೇ ವಿಶ್ವ. ಎಲ್ಲ ಜೀವರಿಗೆ ಜಾಗ್ರದವಸ್ಥೆ (ಜಾಗೃತಿ) ಪ್ರೇರಿಸುವವ ಪ್ರಣವರೂಪೀಗಣೇಶ.



ಗಜಮುಖ - ನೆಲದ ಪ್ರಾಣಿಗಳಲ್ಲಿ ಇಂದು ಅತ್ಯಂತ ಹಿರಿದಾಗಿ ಶಕ್ತಿಯುತವಾದದ್ದು ಆನೆ. ಅತಿ ಸುಂದರವೂ ಹೌದು. ಲಕ್ಷ್ಮೀಕರ. ಆನೆ ಘೀಳಿಟ್ಟರೂ 'ಓಂ'ಕಾರವೇ. ತಮಿಳಿನ 'ಓಂ' (ஓம்) ಅಕ್ಷರ, ಗಣಪತಿಯ ಮುಖಕ್ಕೆ ಬಹು ಸಮೀಪ. 'ಐಂಕರನ್' ಎಂದೂ ಸುಪ್ರಸಿದ್ಧ. ಎರಡು ಪಾದಗಳು, ನಾಲ್ಕು ಕೈಗಳು ಒಂದು ಗಜಮುಖ. ಹೀಗೆ ಸಪ್ತಾಂಗ (ಮಾಂಡೂಕ್ಯ ಉಪನಿಷತ್) 'ವಿನಾಯಕಸ್ತು ವಿಶ್ವಸ್ಯ ಧ್ಯಾನಾದ್ಯೈದ್ಗಜ ವಕ್ತ್ರತಾಂ' - ವಿಶ್ವನಿಗೆ ಆನೆಯ ಮೊಗ. 'ಧ್ಯೇಯೋ ವಿಘ್ನಹರಃ ಕಾಮದಸ್ತ್ವರಯಾಹ್ವಯಂ' - ತೊಂದರೆ ಪರಿಹಾರಕ್ಕೆ, ಇಷ್ಟಾರ್ಥ ಕೈಗೂಡಿ ಶುಭಕಾರ್ಯ ಸುಸೂತ್ರವಾಗಿ ನೆರವೇರಲು ವಿಘ್ನಹರನ ಕಟಾಕ್ಷ ಅತ್ಯವಶ್ಯಕ. ಅದಕ್ಕೇ 'ವಂದಿಸುವುದಾದಿಯಲಿ ಗಣನಾಥನ' ಎಂದು ಭಜಿಸಿದ್ದಾರೆ. ಕರ್ನಾಟಕ ಸಂಗೀತ ಪ್ರಪಿತಾಮಹರೆಂದೇ

ಗಣಪತಿ ಎಂದರೆ ಭಾವೈಕ್ಯದ ಪ್ರತೀಕ. ಅವನನ್ನು ಸಾಮೂಹಿಕವಾಗಿ ಅರ್ಚಿಸಿ, ಆರಾಧಿಸಿ, ಸೌಹಾರ್ದವನ್ನು ಹೆಚ್ಚಿಸಿಕೊಳ್ಳುವ ಸಂಸ್ಕೃತಿ ಸನಾತನ ಧರ್ಮದ್ದು. ಇಂತಹ್ಲಿ ಅವನನ್ನು ಹಾಡಿ ಹೊಗಳುವ ಸ್ತುತಿಗಳೂ ಹಲವಾರು. ಅವುಗಳಲ್ಲಿನ ಪ್ರಸಿದ್ಧವಾದುವನ್ನು ಇಲ್ಲಿ ಪಟ್ಟಿ ಮಾಡಲಾಗಿದೆ. ಗಣಪತಿ ಉತ್ಸವದ ಪ್ರತ್ಯಕ್ಷದರ್ಶನದ ಪ್ರಸಾರದ ಈ ಲೇಖನದಲ್ಲಿ.

# ತಿರುಮಲೆ ತಿರುಪತಿ ದೇವಸ್ಥಾನಗಳು

**ತಿರುಪತಿ**

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎನ್. ರಮೇಶ್‌ಕುಮಾರ್, ಐ.ಎ.ಎಸ್.,**
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದ ವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹೂಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ

--ಬೋಧಾಯನ ಧರ್ಮಸೂತ್ರ.

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

ವಂದನೆಗಳೊಡನೆ ತಮ್ಮ ವಿಶ್ವಾಸಿ,
**ಎನ್. ರಮೇಶ್‌ಕುಮಾರ್**

ಪ್ರಸಿದ್ಧರಾದ ಪುರಂದರದಾಸರಿಗೂ ನಮ್ಮ ಮುದ್ದು ಗಣಪನಿಗೂ ಬಲುನಂಟು. ನೂರಾರು ವರ್ಷಗಳ ಹಿಂದೆ ಈಗಿನಂತೆ ಕರ್ನಾಟಕ ಸಂಗೀತದಲ್ಲಿ ಸುವ್ಯವಸ್ಥಿತರಾಗಿರುವ ಶಿಕ್ಷಣ ಪದ್ಧತಿ ಇರಲಿಲ್ಲ.

ಆಳ್ವಾರ್‌ಗಳೂ ನಂತರ ಅರ್ರೆಯರ್‌ಗಳೂ ಶ್ರೀರಂಗ, ಶ್ರೀವಿಲ್ಲಿಪುತ್ತೂರ್, ತಿರುಮಲೈ, ತಿರುನಾರಾಯಣಪುರ ಮುಂತಾದ ದಿವ್ಯ ಕ್ಷೇತ್ರಗಳಲ್ಲಿ ಭಗವಂತನನ್ನು ಹಾಡಿ, ಕೀರ್ತಿಸಿ ಕುಣಿದು ನರ್ತಿಸಿ ಅನುಭವಿಸುತ್ತಿದ್ದರು. ಇದೇ ಮುಂದೆ ಎಲ್ಲಡೆ 'ಅರ್ರೈಯರ್ ಸೇವೈ' ಎನ್ನಿಸಿತು. ಭಗವನ್ ರಾಮಾನುಜರು ಕರ್ನಾಟಕಕ್ಕೆ ಬಂದಾಗ ಇಲ್ಲಿ ಭಕ್ತಿಪಂಥ ಮುಂಬರಿದು ಅವರ ಶಿಷ್ಯರಾದ ಸೋಮಯಾಜಿ ಆಂಡಾನ್ ಮುಂತಾದವರಿಂದ ಭಗವದರ್ಪಣವಾಯಿತು. ಶ್ರೀ ಪಾದರಾಜರಿಂದ ಭಕ್ತಿತುಳಸಿ, ನಾದದ ನೀರು, ನಾಟ್ಯದ ಹೂಬಿಸಿಲು, ಪ್ರೀತಿಯ ಹರಿವಾಯು ಪ್ರೇರಣೆ ಸಿಕ್ಕಿ ಹರಿದಾಸ ಪಂಥ ಮುಂಬರಿಯಿತು. ಸುಳಾದಿ, ಉಗಾಭೋಗ, ವೃತ್ತನಾಮ, ದಂಡಕ ಪ್ರಕಾರಗಳು ಕೀರ್ತನಕ್ಕೆ ಒಗ್ಗಿದವು.

ವ್ಯಾಸರಾಯರ ಶಿಷ್ಯರೂ ದಾಸವರೇಣ್ಯರೂ ಆದ ಪುರಂದರದಾಸರು (ಕ್ರಿ.ಶ. ೧೪೮೪ -- ೧೫೬೪) ಅಲ್ಲದೆ ತಾಳ್ಲಪಾಕ ಅನ್ನಮಾಚಾರ್ಯರು (ಕ್ರಿ.ಶ. ೧೪೦೮--೧೫೦೩), ಮುಂದೆ ಶ್ರೀ ತ್ಯಾಗರಾಜಸ್ವಾಮಿಗಳು - ಸಂಗೀತ ತ್ರಿಮೂರ್ತಿಗಳು ಇಂಥಾ ಹರಿದಾಸ ಭಕ್ತಿಪಂಥದ ನಾದಸುಧೆಯನ್ನೇ ಭಾರತದಲ್ಲೆಲ್ಲ ಹರಿಸಿ ಭಾವೈಕ್ಯತೆ ಮೂಡಿಸಿದರು. ಭಗವನ್ನಂಬಿಕೆ ಬೆಳೆಸಿ ಬಾಳಿಗೆ ಧೈರ್ಯ ನೀಡಿದರು. ಶ್ರೀ ಸಾಮಾನ್ಯರಿಗೂ ಶ್ರೀ ಗಣನಾಥ ಸಿಗುವಂತೆ ಮಾಡಿದರು. ಕರ್ನಾಟಕ ಸಂಗೀತ ಶಿಕ್ಷಣ ಶೈಲಿಯನ್ನು ಸುವ್ಯವಸ್ಥಿತಗೊಳಿಸಿದುದಕ್ಕೆ ಆದ್ಯಕಾರಣ ನಿಮ್ಮ ಹಂಪಿ ಗಣಪನೇ, ಅವನ ಭಕ್ತ ಶಿರೋಮಣಿ ಪುರಂದರದಾಸರೇ!

(ಆಧಾರ : ಶ್ರೀ ಪುರಂದರ ಸಾಹಿತ್ಯದರ್ಶನ; ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು -೨.)

ಪುಟ್ಟಮಕ್ಕಳಿಗೆ ಕರ್ನಾಟಕ ಸಂಗೀತ ಕಲಿಯುವುದು ಕಷ್ಟವೆನಿಸಿದಾಗ ದಾಸರು ಹಂಪಿಗಣಪನ ಮುಂದೆ ಮಂಡಲ ತಪಸ್ಸು ಮಾಡಿದರಂತೆ. ಅವನನ್ನೇ ಕಾಡಿ, ಬೇಡಿ ಸ್ತುತಿಸಿ ಬೇಸರಿಸಿದರಂತೆ! ಕಡೆಗೆ ತಾಳಲಾರದೆ ಅವನ ಪಾದಕ್ಕೆ ತಲೆ ಚಚ್ಚಿಕೊಂಡಾಗ, ತಕ್ಷಣ ದಾಸರ ಬಾಯಿಂದ ಉಗಮವಾಯಿತು :

ಲಂ - ಬೋ - ದ - ರ
ಲ - ಕು - ಮಿ - ಕ - ರ-

ಅಂ - ಬಾ - ಸು - ತ
ಅಮರ ವಿನುತ ---

೧೫ ನೇ ಮೇಳಕರ್ತ

ಮಲಹರಿರಾಗ, ಸಕಲ ಸಂಪತ್ಕರರಾಗ; ಮಾಯಾ ಮಾಳವಗೌಳದ ಜನ್ಯ. ಚತುರಶ್ರಿ ರೂಪಕತಾಳ, ಇಂಥ ಪಿಳ್ಳಾರಿ ಗೀತೆಗಳಿಂದ ತನುಮನ ಶುದ್ಧಿ ಸಶಾಸ್ತ್ರೀಯ ಸಂಗೀತಾಭ್ಯಾಸಕ್ಕೆ!

ಶ್ರೀ ಗಣನಾಥ ಸಿಂಧೂರವರ್ಣ
ಕರುಣಸಾಗರ ಕರಿವದನ .....!

ಹೀಗೆ ನಮ್ಮ ಗಣನಾಥ ಕರ್ನಾಟಕ ಸಂಗೀತದಲ್ಲಿ ಸರಳೆ, ಸ್ವರಾವಳಿ, ಜಂಟಿವರಸೆ, ಸಪ್ತತಾಳದ ಅಲಂಕಾರಗಳು, ಗೀತಗಳು, ಲಕ್ಷಣಗೀತಗಳು - ಇವಲ್ಲದೆ ಭಕ್ತಿರಸ ಪೂರಿತ ದೇವರನಾಮಗಳು, ಸುಳಾದಿ - ಉಗಾಭೋಗಗಳು - ಎಲ್ಲದರಲ್ಲೂ ವಿವಿಧ ರೂಪಗಳಲ್ಲಿ ಹರಿದು ನರ್ತಿಸಿ ಕರ್ನಾಟಕ ಸಂಗೀತಕ್ಕೇ ನಾಂದಿ ಹಾಡಿದ್ದಾನೆ. ಭದ್ರಬುನಾದಿ ಹಾಕಿ, ಎಲ್ಲ ಸಂಗೀತ ವಿದ್ಯಾರ್ಥಿಗಳಿಗೂ ಅನುಗ್ರಹ ನೀಡಿದ್ದಾನೆ. ಹಾಗಾಗಿ ಕರ್ನಾಟಕ ಸಂಗೀತಕ್ಕೇ ಶ್ರೀಗಣೇಶ ! ಅದಕ್ಕೇ - 'ವಂದಿಸುವುದಾದಿಯಲಿ ಗಣನಾಥನ' ! (ನಾಟ)

ಪಾರ್ವತೀದೇವಿ ಒಮ್ಮೆ ಸ್ನಾನಕ್ಕೆ ಹೋದಾಗ ಕಾವಲಿಗೆಂದು ನೇಮಿಸಿದಳು ಸುಂದರ ಸುದೃಢ ಬಾಲಕನನ್ನು. ಬಾಗಿಲಿಗೆ ಬಂದ ಶಿವನನ್ನೇ ಅರಿಯದೆ ಆತ ತಡೆದನು. ವಾಗ್ವಾದ ಬಿಸಿಯೇರಿ ಶಿವ ತ್ರಿಶೂಲದಿಂದ ಬಾಲಕನ ತಲೆ ತೆಗೆದುಬಿಟ್ಟನು! ತುಂಬ ದುಃಖಿತ ತಾಯಿ ಪಾರ್ವತಿಯ ಬೇಡಿಕೆಯಂತೆ ಉತ್ತರಕ್ಕೆ ತಲೆ ಇಟ್ಟು ಮಲಗಿದ ಆನೆಯೊಂದರ ಶಿರ ತಂದು ಅಳವಡಿಸಿದರು. ಎಲ್ಲ ಗಣಗಳ ಅಧಿಪತಿಯಾಗಿ, ಪ್ರಥಮ ಪೂಜೆ ಸ್ವೀಕರಿಸಿ, ಮೂಷಿಕವಾಹನನಾಗಿ ಜಗತ್ತಿನಲ್ಲೆಲ್ಲಾ ಕಡುಬು ನೈವೇದ್ಯ ಸ್ವೀಕರಿಸಿ, ಭಕ್ತಜನರ ಅಭೀಷ್ಟ ಸಲ್ಲಿಸುತ್ತಾ ಅಗೋ! ಬಂದ ನೋಡಿ ಪುಟ್ಟಗಣಪ !

ಗಜವದನ ಬೇಡುವೆ ಗೌರೀತನಯ
ತ್ರಿಜಗ ವಂದಿತನೆ ಸುಜನರ ಪೊರೆವನೆ
(ಹಂಸಧ್ವನಿ)

ಗಣೇಶನ ಹಬ್ಬ ಬಂದಿತೆಂದರೆ ಅದೇನು ಸಡಗರ, ಸಂಭ್ರಮ! ಭಾರತದಲ್ಲೆಲ್ಲಾ ಒಂದೇ ಜನ, ಒಂದೇಮನ, ಒಂದೇ ಮನೆಯಂತೆ ಭಾರಿ ಉತ್ಸವ! ರಸ್ತೆ ರಸ್ತೆಗೂ ವಿವಿಧ ರೀತಿಯ ವಿವಿಧ ಅಲಂಕಾರಗಳ ವಿವಿಧ ಗಾತ್ರದ ಅನೇಕ ಗಣಪತಿಯರು, ಗೌರಿಯರು! ತಾಯಿ, ಮಗ ಸದಾ ಜತೆ, ಅದೇ ನಮಗೆ ಬಾಳ ವಿಶೇಷತೆ!

ಝುಗ ಝುಗಿಸುವ ಕಿರೀಟ, ವಿಶಾಲ ಹಣೆ, ಹಣೆ ತುಂಬ ವಿಭೂತಿ ಅಥವಾ ತ್ರಿಪುಂಡ್ರ; ತೆರೆದ ಹಿರಿಯ ಕಿವಿಗಳು, ಮನನಿಯಂತ್ರಣ ತೋರಿಸಲು ಪಾಶಾಂಕುಶಗಳು, ಎತ್ತಿದ ಮೇಲಿನ ಕೈಗಳಲ್ಲಿ! ನಕ್ಕ ಚಂದ್ರನಿಗೆ ಶಾಪ ನೀಡಲು ಒಡೆದ ಏಕದಂತ ಕೆಳಗಡೆ ಬಲಗೈಯಲ್ಲಿ; ಕೆಳ ಎಡಗೈಯಲ್ಲಿ ಮೋದ ನೀಡುವ ಮೋದಕ. ಬಲಗಾಲು ಇಳಿಬಿಟ್ಟು ಎಡಗಾಲು ಮಡಿಚಿ, ವಿಶ್ವರೂಪೀ ಲಂಬೋದರಕ್ಕೆ ಕಾಲದ ಕಾಳಸರ್ಪ ಸುತ್ತಿ ನಗುನಗುತ್ತಾ ಆಶೀರ್ವದಿಸುವ ಈ ಆನೆಮುಖನಿಗೆ - ಜಯವಾಗಲಿ! ಪುಟ್ಟವಾಹನ ಚಂಚಲ ಇಲಿ, ಕಡುಬಿನ ತಟ್ಟೆ ಮುಂದೆ! ಹೀಗೆ ಹಾವು - ಇಲಿ ವೈರ ಇರದೆ, ಶಾಂತಿ ಸೌಹಾರ್ದದ ಸಾಕಾರಮೂರ್ತಿ!

ಶರಣು ಸಿದ್ಧಿ ವಿನಾಯಕ
ಶರಣು ವಿದ್ಯಾ ಪ್ರದಾಯಕ
ಶರಣು ಪಾರ್ವತಿ ತನಯಮೂರುತಿ
ಶರಣು ಮೂಷಿಕ ವಾಹನ
(ಸೌರಾಷ್ಟ್ರ)

* * * * * * * * * * * * * * * * * * *

ಅಗಜಾನನ ಪದ್ಮಾರ್ಕಂ
ಗಜಾನನ ಮಹರ್ನಿಶಂ
ಅನೇಕ ದಂ ತಂ ಭಕ್ತಾನಾಂ
ಏಕದಂತಂ ಉಪಾಸ್ಮಹೇ

ಈ ಧ್ಯಾನ ಶ್ಲೋಕದ ಸೊಗಸು ನೋಡಿ: 'ಅಗಜೆ' - ಪರ್ವತರಾಜನ ಸುತೆ ಪಾರ್ವತಿ; ಆಕೆಯ, ಆನನ -- ಮುಖ ಪದ್ಮಕ್ಕೆ ಅರ್ಕ - ಸೂರ್ಯನಂತಿರುವವ; ಈ ಗಜಾನನನನ್ನು ಅಹರ್ನಿಶಂ - ಸದಾಕಾಲ, ಉಪಾಸ್ಮಹೇ - ಭಜಿಸುತ್ತೇನೆ. ಆತ ಎಂತಹವನು? ಭಕ್ತರಿಗೆ ಅನೇಕ ವರ ನೀಡುವ ಏಕದಂತ! ಸಂಸ್ಕೃತವೇ ಸೊಗಸು - ಅದರಲ್ಲಿ ಕವಿವಾಣಿ ಸಂಸ್ಕೃತ ಮತ್ತೂ ಸೊಬಗು!

ವಕ್ರತುಂಡ ಮಹಾಕಾಯ
ಕೋಟಿಸೂರ್ಯ ಸಮಪ್ರಭ
ನಿರ್ವಿಘ್ನಂ ಕುರುಮೇ ದೇವ
ಸರ್ವಕಾರ್ಯೇಷು ಸರ್ವದಾ

* * * * * * * * * * * * * *

ಶ್ರೀ ಗಣಪತಿ ನೀ ಸೇವಿಂಪರಾರಾ
(ಸೌರಾಷ್ಟ್ರ)
ಶ್ರೀ ತ್ಯಾಗರಾಜಸ್ವಾಮಿಗಳ ಕೃತಿ

ರಾವಣ ಲಂಕೆಗೆ ಆತ್ಮಲಿಂಗ ತರುವಾಗ ಸಂಧ್ಯೆಗೆ ಸಮಯವಾಗಲು, ಆತ್ಮಲಿಂಗ ಕೆಳಗಿಡಲು ಆಗದೆ ಚಡಪಡಿಸಿದನು. ದೇವತೆಗಳ ಮೊರೆ ಕೇಳಿ ಪುಟ್ಟ ಬಾಲಕನಾಗಿ ಗಣಪ ಬಂದನು. ಲಿಂಗವನ್ನು ತಾನು ಸ್ವೀಕರಿಸಿ ಭಾರ ತಡೆಯಲಾರದಂತೆ ನಟಿಸಿ ಮೂರು ಬಾರಿ 'ರಾವಣಾ, ರಾವಣಾ!' ಅಂತ ಕೂಗಿ ಥಟ್ಟನೆ ಕೆಳಗಿಟ್ಟ ಘಟನೆ ಎಲ್ಲರಿಗೂ ಗೊತ್ತು! ಆ ಆತ್ಮಲಿಂಗವೇ ಗೋಕರ್ಣೇಶ್ವರ.

ಅದೇ ರೀತಿ ರಾವಣನ ತಮ್ಮ ವಿಭೀಷಣನೂ ಶ್ರೀರಾಮನಿಂದ ಶ್ರೀರಾಮನ ಕುಲದೈವ ಶ್ರೀರಂಗನಾಥಸ್ವಾಮಿಯನ್ನು ಸ್ವೀಕರಿಸಿದನು. ಲಂಕೆಗೊಯ್ಯುವಾಗ ದಾರಿಯಲ್ಲಿ ಸಂಧ್ಯೆಗೆ ಸಮಯವಾಗಿ ಕೆಳಗಿಡಲಾಗದೆ ಯೋಚಿಸಿದಾಗ ಮತ್ತೆ ಗಣಪವಟು ಇದೇ ರೀತಿ ಮಾಡಿದನು. ಶ್ರೀರಂಗಕ್ಷೇತ್ರದಲ್ಲಿ ಈಗ ಶ್ರೀರಂಗನಾಥಸ್ವಾಮಿ ನಮಗಾಗಿ ದರ್ಶನ ನೀಡುತ್ತಿರುವರು! ಪಕ್ಕದಲ್ಲೇ ಉಚ್ಚಿ ಪಿಳ್ಳೈಯಾರ್ ತಿರುಚ್ಚಿಯಲ್ಲಿ! ಎಂದೆಂದಿಗೂ ಶ್ರೀರಂಗಕ್ಷೇತ್ರ ಶ್ರೀ ವೈಷ್ಣವರಿಗೆ ಅತ್ಯಂತ ಪವಿತ್ರಕ್ಷೇತ್ರ! ಶ್ರೀರಾಮಾನುಜ ಮಹಾಮುನಿ ತೋರಿಕೊಟ್ಟ ಭಗವನ್ನಂಬಿಕೆಯ ದಯಾಪಾತ್ರ!

ಶ್ರೀ ಕನಕದಾಸರು ಗಣಪನನ್ನು --
'ನಮ್ಮಮ್ಮ ಶಾರದೆ, ಉಮಾಮಹೇಶ್ವರಿ,
ನಿಮ್ಮೊಳಗಿಹನ್ಯಾರಮ್ಮಾ

ಎಂದು ಅದ್ಭುತವಾಗಿ ಸ್ತುತಿಸಿದ್ದಾರೆ. ಹಂಸಧ್ವನಿರಾಗದ 'ವಂದೇನಿಶಮಹಂ ವಾರಣವದನಂ' ಕೆಲವು ದಶಕಗಳ ಹಿಂದೆ ಪ್ರಬಲವಾಗಿದ್ದ ಸುಂದರ ಗಣೇಶಸ್ತುತಿ.

ಭಾದ್ರಪದ ಚೌತಿಯಂದು ಆಗಮಿಸುವ ಈ ಗಣಪತಿ ಹಬ್ಬಕ್ಕೆ ಮನೆ - ಮನ ಸಿಂಗಾರ. ತಳಿರು ತೋರಣ, ಅಮ್ಮ ಮಾಡುವ ಕಡುಬು ಹೂರಣ, ವರ್ಣ ರಂಗೋಲಿ ಚಿತ್ರಣ, ಬೆಳಗುವ ನಂದಾದೀಪ, ಮೊಳಗುವ ನಾದಸ್ವರ, ಎತ್ತರದ ಸಿಂಗಾರಪೂರ್ಣ ಮಣಿಮಂಟಪ, ಹೂ-ಹಣ್ಣು - ಪತ್ರೆ - ಕಾಯಿ ಎಲ್ಲ ಪ್ರತಿಷ್ಠಿತ ಗಣೇಶನಿಗೆ ಅರ್ಪಣ. ಧ್ಯಾನನಾಮ ಪುನಶ್ಚರಣ. ಗೌರಮ್ಮನಿಗೆ ಬಾಗಿನ. ದೇಶದ ಎಲ್ಲ ತರದ ಭಕ್ತ ಜನಕ್ಕೆ ಬಲು ಸಡಗರದ ವಾತಾವರಣ. ಎಲ್ಲರಿಗೂ ಬೇಕು ಗಣಪನ ಕಟಾಕ್ಷದ ಪ್ರಥಮ ರಕ್ಷಣ. ಪುರೋಹಿತರಿಂದ ಶಾಸ್ತ್ರೋಕ್ತ ಆವಾಹನೆ, ಪೂಜೆ, ಮಂಗಳಾರತಿ. ಅನೇಕ ಕಡೆ ಹತ್ತು ದಿನ ವೇದೋಪಾಸನೆ, ನಾದೋಪಾಸನೆ. ಕಡೆಗೆ ವೈಭವಯುತ ಮೆರವಣಿಗೆಯಲ್ಲಿ ಪ್ರೀತಿಯ ಬೀಳ್ಕೊಡುಗೆ, ಮತ್ತೆ ಬರಲು ಪುಟಾಣಿ ಹೃದಯಗಳ ಅಕ್ಕರೆಯ ಕರೆ!

ಹಿಂದೆ ಚೌತಿದಿನವಂತೂ ಪುಟ್ಟ ಪುಟ್ಟ ಗಣಪ-- ಗೌರಿಯರು ಸಿಂಗರಿಸಿಕೊಂಡು ನಲಿನಲಿಯುತ್ತಾ ಕಿವಿ ಹಿಡಿದುಕೊಂಡು ಕೂತು ಎದ್ದು, ಗಲ್ಲ ಹೊಡೆದು ಅಕ್ಷತೆ ಸಮರ್ಪಿಸಿ ಗಣಪನಿಗೆ ಪ್ರದಕ್ಷಿಣ ಮಾಡಿ

ನಮಿಷಿ (೯೮-೯೯-೧೦೦-೧೦೧-೧೦೨) ಅಂತ ಎಣಿಸಿಕೊಂಡು ಹೋಗುತ್ತಿದ್ದುದು ಇನ್ನೂ ಸವಿ ನೆನಪು! ಅಂದೇ ೧೦೮ ಗಣಪತಿದರ್ಶನ ಸಂಜೆಯೊಳಗೇ ಆಗದೇಕಲ್ಲ! ಚೌತಿ ಚಂದ್ರದರ್ಶನ ಮಾಡಿದರೆ, ಶ್ರೀಕೃಷ್ಣ ಶ್ಯಮಂತಕಮಣಿ ಮರಳಿ ತಂದ ಕಥಾಶ್ರವಣ ಕೇಳಿದರೆ ಪರಮಪಾವನ! ಪುಟ್ಟಗಣಪ, ತುಂಟಕೃಷ್ಣ ಸದಾ ಜತೆ, ಹತ್ತಿರವೇ ಗೋಕುಲಾಷ್ಟಮಿ! ವಿದ್ಯಾಗಣಪತಿ, ಶಕ್ತಿಗಣಪತಿ, ನರ್ತನ ಗಣಪತಿ, ಬುದ್ಧಿಸಿದ್ಧಿ ಗಣಪತಿ - ಎಷ್ಟೆಲ್ಲ ಉಂಟು!

ವ್ಯಾಸರ ಮುಂದೆ ಕರಾರು ಹಾಕಿ ಕರಾರುವಾಕ್ಕಾಗಿ ಮಹಾಭಾರತ ಬರೆದ ಗಣಪ ಅಲ್ಲವೆ! ರಾಕ್ಷಸ ವಾತಾಪಿ - ಇಲ್ವಲರನ್ನೂ ಇಲ್ಲವಾಗಿಸಿದ ಅಗಸ್ತ್ಯರ ಲೋಪಾಮುದ್ರೆ ಇದ್ದ ಕಮಂಡಲು ಉರುಳಿಸಿ ಕಾವೇರಿ ಹರಿಸಲು ಕಾಕರೂಪಿಯಾಗಿ ಬಂದ ಗಣಪನಲ್ಲವೆ ಈತ? ಸಂಗೀತ ತ್ರಿಮೂರ್ತಿಗಳಲ್ಲಿ ಒಬ್ಬರಾದ, ಕಾರ್ತಿಕೇಯ ಅಂಶ ಸಂಭೂತರೆನಿಸಿದ ನಾದಯೋಗಿ ಮುತ್ತುಸ್ವಾಮಿ ದೀಕ್ಷಿತರ ಅತ್ಯಂತ ಪ್ರಸಿದ್ಧ ಕೃತಿ 'ವಾತಾಪಿಗಣಪತಿ ಭಜೇ ಹಂ' (ಹಂಸಧ್ವನಿ ರಾಗ, ಆದಿತಾಳ) ಎಲ್ಲ ವಿದ್ವಾಂಸರೂ ಗಣಪನನ್ನು ಪ್ರಥಮತಃ ಪ್ರಾರ್ಥಿಸುವ ಕೃತಿ.

ವಾತಾಪಿ ಗಣಪತಿಂ ಭಜೇ ಹಂ
ವಾರಣಾಸ್ಯಂ ವರಪ್ರದಂ ಶ್ರೀ -ಪ-

ಭೂತಾದಿ ಸಂಸೇವಿತ ಚರಣಂ
ಭೂತ ಭೌತಿಕಾ ಪ್ರಪಂಚ ಭರಣಂ
ವೀತ ರಾಗಿಣಂ ವಿನುತಯೋಗಿಣಂ
ವಿಶ್ವಕಾರಣಂ ವಿಘ್ನವಾರಣಂ -ಅ.ಪ.-

ಪುರಾಕುಂಭಸಂಭವ ಮುನಿವರ
ಪ್ರಪೂಜಿತಂ ತ್ರಿಕೋಣ ಮಧ್ಯಗತಂ
ಮುರಾರಿ ಪ್ರಮುಖಾದ್ಯುಪಾಸಿತಂ
ಮೂಲಾಧಾರಕ್ಷೇತ್ರಾಸ್ಥಿತಂ
ಪರಾರಿ ಚತ್ವಾರಿ ವಾಗಾತ್ಮಕಂ
ಪ್ರಣವ ಸ್ವರೂಪ ವಕ್ರತುಂಡಂ
ನಿರಂತರಂ ನಿಖಿಲ ಚಂದ್ರ ಖಂಡಂ
ನಿಜವಾಮಕರ ವಿದ್ಯದೇಕ್ಷು ದಂಡಂ
ಕರಾಂಬುಜಪಾಶ ಬೀಜಾಪೂರಂ
ಕಲುಷ ವಿದೂರಂ ಭೂತಾಕಾರಂ
ಅನಾದಿ ಗುರು ಗುಹ ತೋಷಿತ ಬಿಂಬಂ
ಹಂಸಧ್ವನಿ ಭೂಷಿತ ಹೇರಂಬಂ

ಮತ್ತೊಂದು ಕೃತಿ ಹಂಸಧ್ವನಿಯಲ್ಲೇ ಇದೆ ನೋಡಿ-

ವಿನಾಯಕಾ ನಿನು ವಿನಾ ಬ್ರೋಚುಟಕು

ವರಸಿದ್ಧಿ ವಿನಾಯಕ, ಸಿದ್ಧಿ ಬುದ್ಧಿ ಪ್ರದಾಯಕ - ವಿಶಿಷ್ಟ ವಿಶ್ವರೂಪಿಯನ್ನು ದೀಕ್ಷಿತರು ಹೀಗೆ ಸ್ತುತಿಸಿದ್ದಾರೆ. ಧ್ಯಾನ ಶ್ಲೋಕವಾಗಿ ಜಪಿಸಿದರೆ ಬಹು ಮಂಗಳಕರ - 'ಸಿದ್ಧಿ ವಿನಾಯಕಂ ಅನಿಶಂ' (ಷಣ್ಮುಖಪ್ರಿಯ) - ಕೈಲಾಸಕ್ಕೆ ನಾರದರು ಜ್ಞಾನದ ಫಲ ತಂದಾಗ ಕಾರ್ತಿಕೇಯ ಗಣಪರಲ್ಲಿ ಹುಸಿಮುನಿಸಿ ನಡೆದು, ತನ್ನ ತಂದೆತಾಯಿಯರನ್ನು ಪ್ರದಕ್ಷಿಣೆ ಮಾಡಿ ಗುಡುಗುಡು ಓಡಿ ಬಂದು ಗಮ್ಮನೆ ಒಳಿತು ಪಂದ್ಯ ಗೆದ್ದ ಬಲುಬುದ್ಧಿಯ ಮೋಹನ ಗಣಪ ಎಂಥ ಚೆಲುವ! ಪಂಚಭೂತ ಸ್ವರೂಪಿ, ಪ್ರಣವ ಸ್ವರೂಪೀ ಈ ಭಗವಂತನನ್ನು ಎಷ್ಟು ಕೊಂಡಾಡಿದರೂ ಸಾಲದು!

'ಪಂಚಮಾತಂಗ ಮುಖಗಣಪತಿ' (ಮಲಹರಿ) ಯಲ್ಲಿ ದೀಕ್ಷಿತರು ಸುಂದರವಾಗಿ ಧ್ಯಾನಿಸಿದ್ದಾರೆ.

ಹಾಗೆಯೇ ಮಧುರೈ ವಲ್ಲಭ ಗಣಪತಿ ಸಹ ಪ್ರಸಿದ್ಧ. 'ವಲ್ಲಭ ನಾಯಕಂ ಸ್ಮರಾಮಿ' ಕೀರ್ತನೆಯೂ ಸುಪ್ರಸಿದ್ಧ. ಅಣ್ಣನ ಪೂಜೆ ಮರೆತು ವಳ್ಳಿಯನ್ನರಸಿ ಹೋದಾಗ ಕೆಲಸ ಗೈಗೂಡದೆ ಮರಳಿ ಬಂದು ಗಣೇಶನನ್ನು ಅರ್ಚಿಸಿ ಮುಂದೆ ವಳ್ಳಿಯನ್ನು ವಿವಾಹವಾದದ್ದು ಸುಪ್ರಸಿದ್ಧ. ದೀಕ್ಷಿತರ ಈ ಕೃತಿ ಬಹು ಪ್ರಸಿದ್ಧ.

ಶ್ರೀ ಮಹಾಗಣಪತಿಂ ರವಸುಮಾ
ಸಿದ್ಧಿ ವಿನಾಯಕಂ ಮಾತಂಗಮುಖ

ಗೌಳರಾಗದ ಈ ಕೃತಿ ಚಿರನೂತನ - ಬಲಮುರಿಗಣೇಶ ಅಂದರೆ ಅವನ ಬಲಗಡೆಗೆ ಸೊಂಡಿಲು ತುದಿ ತಿರುಗಿಸಿಕೊಂಡ ಗಣಪತಿ ಬಲು ಶಕ್ತಿಪೂರ್ಣ ವರದಾಯಕ.

ಮಹಾ ಗಣಪತಿಂ ಮನಸಾ ಸ್ಮರಾಮಿ
ಪ್ರಸಿದ್ಧ ವಾಸುದೇವಾದಿ ವಂದಿತ
(ನಾಟ್ಟೈ)

ಕೃತಿ ಸಹ ತುಂಬ ಪ್ರಸಿದ್ಧ.

ನಮ್ಮ ಗಣಪತಿಗೆ ನವ ಭಾರತ ಭಾವೈಕ್ಯತಾ ರೂಪ ನೀಡಿ ವಿಶ್ವವನ್ನೆಲ್ಲಾ ಗಣಪ - ಮಯಮಾಡಿ ದೆನಕ ಬಾಂಧವ್ಯ ಬೆಸೆದವರು ಲೋಕಮಾನ್ಯ ತಿಲಕರು. ಮಹಾರಾಷ್ಟ್ರದಿಂದ ಈ ಕೇಸರಿ, ಸ್ವಾತಂತ್ರ್ಯ ಸಂಗ್ರಾಮವನ್ನು ಗರ್ಜಿಸಿ ರಾಷ್ಟ್ರೀಯ ಹಬ್ಬವಾಗಿ ಎಲ್ಲ ಭಾರತೀಯರ ಮನದಲ್ಲೂ ಒಬ್ಬನೇ ಭಗವಂತನನ್ನು ಪ್ರತಿಷ್ಠಾಪಿಸಿದರು. ಈ ಹಬ್ಬದ ವೇಳೆ ಪೂರಾ ಉತ್ತರ ಭಾರತವೇ ಶ್ರೀ ಗಣೇಶಮಯ. ನಾಲ್ವತ್ತಡಿ ಐವತ್ತಡಿ ಎತ್ತರದ ಬಹು ಸುಂದರ ವರ್ಣಮೂರ್ತಿಗಳು, ಹೇಗಾದರೂ ಸಮುದ್ರದಲ್ಲಿ ವಿಸರ್ಜಿಸಲು ಮನಸ್ಸು ಬರುತ್ತದೆಯೋ ಭಕ್ತರಿಗೆ! ಈ ಮೂರ್ತಿಗಳನ್ನು ಮಾಡಲು ತಿಂಗಳುಗಟ್ಟಲೆ ಸಿದ್ಧತೆ - ಭಕ್ತಿ - ಶಕ್ತಿ - ಭುಕ್ತಿ - ಮುಕ್ತಿಗಳ ಐಕ್ಯತೆ. ನಟರಾಜನಂತೆ ನಾಟ್ಯಮಾಡುವ ಗಣಪನಿಂದ ಹಿಡಿದು ಶ್ರೀಕೃಷ್ಣನಂತೆ ನವಿಲುಗರಿ ಕಿರೀಟ ವೇಷ ಧರಿಸಿದ ಗಣಪನೂ ಉಂಟು. ಪ್ರತಿ ಮಾರ್ಕೆಟ್ ವೃತ್ತವೂ ಒಂದು ಅದ್ಭುತ ಗಣಪ ಕಿನ್ನರ ಲೋಕ. 'ಗಣಪತಿ ಬಾಪ್ಪಾ ಮೋರಿಯಾ!' ಘೋಷ - ದೇವದುಂದುಭಿ - ಜನ ಸಾಗರದ ಮಹಾಪೂರದಲ್ಲಿ ನಂ ಗಣಪ ಹಂಸದಂತೆ, ನಾದ - ವೇದ - ಆಮೋದ - ಪ್ರಮೋದಗಳಿಂದ ಮನೆ ಮನ ತುಂಬಿ ಸಮುದ್ರ ಸೇರಿ ಮತ್ತೆ ಮರಳುವನು, ಮುಂದಿನ ವರ್ಷ!

'ಚಿಕ್ಕ ಕೆರೇಲಿ ಬಿದ್ದ - ದೊಡ್ಡ ಕೆರೇಲೆ ಅದೊಂದು ಅದ್ಭುತ ಭಾವೈಕ್ಯತಾ ಅನುಭವ--

ಈ ಕೋಲಾಟದ ಸೊಬಗು ನೋಡಿ--

ಶರಣು ಶರಣು ಹೊಯ್ ಗಣನಾಯ್ಕ
ನಮ್ಮ ಕರುಣದಿಂದಲಿ ಕಾಯೋ ಗಣನಾಯ್ಕ

ವಿದ್ಯಾವ ಕಲಿಸಯ್ಯ ಗಣನಾಯ್ಕ
ಬುದ್ಧೀಯ ನೀಡಯ್ಯ ಗಣನಾಯ್ಕ
ಎಳ್ಳುಂಡೆ ಜೇನುತುಪ್ಪ ಗಣನಾಯ್ಕ
ಸಿರಿಕಡುಬು ನೊರೆಹಾಲು ಗಣನಾಯ್ಕ
|| ಶರಣು ||

ಇತ್ಯಾದಿ--

ನಮ್ಮ ದೇಶವೇ ಗಣೇಶರೂಪ. ಹಿಮಾಲಯ ಅವನ ಕಿರೀಟ. ಪೂರ್ವ ಪಶ್ಚಿಮ ಪ್ರದೇಶಗಳೇ ಪಾಶಾಂಕುಶ ಹಸ್ತಗಳು. ವಿಂಧ್ಯವೇ ಕಟಿನಾಗರ ಮೇದಿನೀ. ಗುಜರಾತ್ - ಬಂಗಾಲಗಳು ಅಭಯ ವರದ ಹಸ್ತಗಳು. ದಕ್ಷಿಣ ಭಾರತ ಕಾಲು ಪಾದ-ಪದ್ಮಗಳು. ಈ ಗಣಪ ವಿಶ್ವರೂಪಿಯನ್ನು ಸದಾ ಮುಂದಿನ ಪೀಳಿಗೆಗೆ ರಕ್ಷಿಸುವಾ! ಹಂಪೆ, ತಿರುಚ್ಚಿ, ಹಳೇಬೀಡು, ಮಧುರೈ ಗಣಪತಿಗಳು ಪ್ರಸಿದ್ಧ. ಜಾವಾ, ಸುಮಾತ್ರಾ, ಕಾಂಬೋಡಿಯಾ, ಥಾಯ್ಲೆಂಡ್, ಜಪಾನ್ ಮುಂತಾದ ವಿದೇಶಗಳಲ್ಲಿಯೂ ವಿವಿಧ ರೀತಿ ಗಣಪರುಂಟು. ವಿಶಿಷ್ಟ ಸ್ವಯಂಭು ಗಣಪರೂ ಉಂಟು. ಇಂಥ ವಿಶ್ವರೂಪೀ ವಿಶ್ವವ್ಯಾಪೀ ಸಂಗೀತ ಶ್ರೀ ಗಣೇಶ ಎಲ್ಲರ ಜೀವನ ಸಂಜೀವನ ಮಾಡಿ ಮೋದ ನೀಡಲಿ!

ನಮಾಮಿ ವಿಘ್ನೇಶ್ವರ ಪಾದ ಪಂಕಜಮ್



# ಯುಗಾಂತರಗಳಲ್ಲಿ ಗಣೇಶ

---ಅನಂತ ಚಿಂತಾಮಣಿ ಜ್ಯೋತಿಷೀ.

ಸುಯೋಗ್ಯ ವೈದ್ಯರು ಹೇಗೆ ರೋಗಿಯ ಪ್ರವೃತ್ತಿಯನ್ನು ಮನನ ಮಾಡಿಕೊಂಡು ಅದರ ಅನುಸಾರವಾಗಿ ಶಾರೀರಿಕ ವ್ಯಾಧಿಯ ನಿವೃತ್ತಿಗಾಗಿ ಔಷಧ ಮತ್ತು ಪಥ್ಯವನ್ನು ನಿರ್ಧರಿಸುತ್ತಾರೆಯೋ ಅದೇ ಪ್ರಕಾರವಾಗಿ ಸುಯೋಗ್ಯ ಗುರು ಮತ್ತು ಪರಮ ಪಿತಾ ಪ್ರಭುವು ಕೂಡ ಸಾಧಕನ ಪ್ರಕೃತಿಯ ಅನುಸಾರವಾಗಿ ಅವನ ಮಾನಸಿಕ ಕಾಮ ಕ್ರೋಧಾದಿಗಳ ಉಪಶಯನಕ್ಕಾಗಿ ಉಪಾಸನಾ ರೂಪದ ಔಷಧ ಮತ್ತು ಸಂಯಮರೂಪ ಪಥ್ಯದ ಪ್ರೇರಣೆ ಮಾಡುತ್ತಾನೆ. ಆದ್ದರಿಂದ ಆ ತತ್ವಪ್ರಧಾನ ಪ್ರಕೃತಿ ವಿಶಿಷ್ಟಸಾಧಕನ ಸಲುವಾಗಿ ಆ ದೇವತಾರೂಪದ ಪರಮಾತ್ಮಪ್ರಭುವಿನ ಉಪಾಸನೆಯು ಗ್ರಾಹ್ಯವಾಗಿದೆ. ಇದೇ ವಿಷ್ಣು, ದೇವಿ, ರವಿ, ಶಿವ, ಗಣಪತಿ ಇವರನ್ನು ಕುರಿತ ಪಂಚದೇವೋಪಾಸನೆಯ ಅಂತರಂಗ ರಹಸ್ಯವಾಗಿದೆ.

ಆಕಾಶಸ್ಯಾಧಿಪೋ ವಿಷ್ಣುः
ಅಗ್ನೇಶ್ಚೈವ ಮಹೇಶ್ವರೀ
ವಾಯೋಃ ಸೂರ್ಯಃ ಕ್ಷಿತೇರೀಶೋ
ಜೀವನಸ್ಯ ಗಣಾಧಿಪಃ

ಎಂಬಂತೆ ಜಲತತ್ವಕ್ಕೆ ಗಣಪತಿಯು ಅಧಿಷ್ಠಾತನು.

ದುಷ್ಟರ ನಾಶ ಶಿಷ್ಟರ ರಕ್ಷಣೆ ಧರ್ಮಸ್ಥಾಪನೆಯ ಗುರಿ ಉದ್ದೇಶ ಹೊಂದಿರುವ ಗಣಪತಿಯ ಕೆಲವು ಅವತಾರಗಳು ಇಂತಿವೆ.

### ಮಹೋತ್ಕಟ ವಿನಾಯಕ

ಭಗವಾನ್ ಗಣಪತಿಯು ಕೃತಯುಗದಲ್ಲಿ ಮಹೋತ್ಕಟ ವಿನಾಯಕನಾಗಿದ್ದು ಅವನಿಗೆ ೧೦ ಭುಜಗಳು, ಸಿಂಹವಾಹನವಿದ್ದು ತೇಜೋಮಯನಾಗಿರುವನು. ದೇವಾಂತಕ ನರಾಂತಕರಾದಿ ಪ್ರಮುಖ ದೈತ್ಯರ ತೊಂದರೆಗೆ ಒಳಗಾದ ದೇವ ಋಷಿ ಮುನಿ ಮನುಷ್ಯ ಮತ್ತು ಸಮಸ್ತ ಪ್ರಾಣಿಗಳನ್ನು ಭಯಮುಕ್ತಗೊಳಿಸಿದನು. ದೇವಾಂತಕ ಮತ್ತು ನರಾಂತಕರೆಂಬ ಅಣ್ಣ ತಮ್ಮಂದಿರು ಅಖಂಡ ತಪಸ್ಸಿನಿಂದ ಶಿವನನ್ನು ಒಲಿಸಿಕೊಂಡು ತ್ರೈಲೋಕ್ಯ ವಿಜಯದ ವರವನ್ನು ಪಡೆದುಕೊಂಡರು. ವರದಿಂದ ಉನ್ಮತ್ತರಾದ ಈ ಇಬ್ಬರೂ ದೈತ್ಯ ಬಂಧುಗಳು ಎಲ್ಲರನ್ನು ಪೀಡಿಸಲಿಕ್ಕೆ ತೊಡಗಿದರು. ಮೂರು ಲೋಕಗಳು ಇವರ ಆಧಿಪತ್ಯಕ್ಕೆ ಒಳಗಾಗಿ ದೇವತೆ, ತಪಸ್ವಿ ಋಷಿಮುನಿ ಸದಾಚಾರದ ಬ್ರಾಹ್ಮಣರು ಅಲ್ಲಿ ಇಲ್ಲಿ ಇದ್ದು ಬಹುಕಷ್ಟದಿಂದ ಜೀವನ ನಿರ್ವಹಿಸ ಹತ್ತಿದರು.

ದೇವಮಾತೆ ಅದಿತಿಯು ತನ್ನ ಮಕ್ಕಳಿಗಾದ ದುರ್ದೆಸೆಗೆ ದುಃಖಿತಳಾಗಿ ಪತಿ ಕಶ್ಯಪರ ಹತ್ತಿರ ತನ್ನ ದುಃಖವನ್ನು ತೋಡಿಕೊಂಡಾಗ-- 'ದೇವಿ ಚಿಂತಿಸದೇಡ. ಶೀಘ್ರವಲ್ಲಿ ನಿನ್ನ ಗರ್ಭದಿಂದ ಸಾಕ್ಷಾತ್ ಪರಮಾತ್ಮನು ವಿನಾಯಕನ ರೂಪದಲ್ಲಿ ಆವಿರ್ಭೂತನಾಗುವನು. ನೀನು ಅವನ ಉಪಾಸನೆ ಮಾಡು' ಎಂದರು.



ಪತಿಯ ಹೇಳಿಕೆಯಂತೆ ಅದಿತಿಯು ಮಂಗಲ ಮೂರ್ತಿಯ ಆರಾಧನೆ ಗೈದಾಗ ಹತ್ತು ಭುಜಗಳನ್ನು ಹೊಂದಿದ ಕೈಗಳಲ್ಲಿ ಪರಶು ಕಮಂಡಲು ಮೊದಲಾದವುಗಳನ್ನು ಧರಿಸಿದ, ಕುಂಡಲರತ್ನ ಕೂಡಿದ ಕಿವಿಗಳನ್ನು ಹೊಂದಿದ, ಲಲಾಟದಲ್ಲಿ ಕಸ್ತೂರಿ ತಿಲಕ ಲೇಪಿಸಿಕೊಂಡವನು, ಮಂಗಲ ಕಂಠದಲ್ಲಿ ಮುತ್ತುಗಳ ಮಾಲೆಯಿಂದ ಶೋಭಿಸುವ ಬಂಗಾರದ ಕಟಿಸೂತ್ರ ಧರಿಸಿದ ಹೊಕ್ಕಳ ಮೇಲೆ ಹಾವನ್ನು ಸುತ್ತಿಕೊಂಡ ಸಿದ್ಧಿ - ಬುದ್ಧಿಯರೆಂಬ ಇಬ್ಬರೂ ಹೆಂಡಂದಿರು ಪಡೆದ ಮಂಗಲ ಮೂರ್ತಿ ಗಣಪತಿಯು ಪ್ರತ್ಯಕ್ಷನಾದಾಗ ಅದಿತಿ ಮಾತೆಯು ಬಾರಿ ಬಾರಿಗೆ ವಂದಿಸಿ ಸ್ತುತಿಗೈದು ಪುತ್ರರೂಪದಿಂದ ಪ್ರಕಟನಾಗಿ ಕಲ್ಯಾಣ ಮಾಡುವಂತೆ ಅವನೊಡನೆ ಬೇಡಿಕೊಂಡಳು. ಆಗ ಭಗವಾನ್ ಗಣಪತಿಯು ತಥಾಸ್ತು ಎಂದು ಹೇಳಿ ದಿವ್ಯಲೋಕಕ್ಕೆ ಹೊರಟುಹೋದನು. ಅತ್ತ ಪೃಥ್ವಿದೇವಿ, ಎಲ್ಲ ದೇವರುಗಳು, ಋಷಿ, ಮುನಿಗಳೆಲ್ಲರೂ ಅಸುರರಿಂದ ತ್ರಾಸವಾಗುತ್ತಿರುವುದರ ನಿವಾರಣೆಗಾಗಿ ಬ್ರಹ್ಮನೊಂದಿಗೆ ವಿನಾಯಕನ ಪ್ರಾರ್ಥನೆಗೈದಾಗ ಈ ರೀತಿ ಆಕಾಶವಾಣಿಯಾಯಿತು. 'ಧೈರ್ಯತಾಳಿರಿ. ಅದಿತಿಯ ಗರ್ಭದಿಂದ ಮಹೋತ್ಕಟರೂಪದಿಂದ ಅವತಾರವಾಗುವುದು. ಅವನು ದುಷ್ಟರನ್ನು ವಧಿಸಿ ಎಲ್ಲರ

### ಧೂಮ್ರಕೇತು

ಗಣಪತಿಯು ಕಲಿಯುಗದಲ್ಲಿ ಧೂಮ್ರಕೇತು ಎಂಬ ಹೆಸರಿನಿಂದ ಮ್ಲೇಂಛನಾಶ, ವರ್ಣಾಶ್ರಮ ಸ್ಥಾಪನೆ, ಧರ್ಮ ಸ್ಥಾಪನೆಗಾಗಿ ಅವತರಿಸಲಿದ್ದಾನೆ. ಕಲಿಯನ್ನು ನಾಶಗೊಳಿಸಿ ಸತ್ಯಯುಗದ ಅವತರಣೆ ಮಾಡಲಿರುವನು.

ಮುದ್ಗಲ ಪುರಾಣದಲ್ಲಿ ಎಂಟು ಅವತಾರಗಳಿವೆ.

| | | |
|---|---|---|
| ೧. ವಕ್ರತುಂಡ | ಸಿಂಹವಾಹನ | ಮತ್ಸರಾಸುರ ವಧೆ. |
| ೨. ಏಕದಂತ | ಮೂಷಿಕವಾಹನ | ಮದಾಸುರ ವಧೆ. |
| ೩. ಮಹೋದರ | ಮೂಷಿಕವಾಹನ | ಮೋಹಾಸುರ ನಾಶ |
| ೪. ಗಜಾನನ | ಮೂಷಿಕವಾಹನ | ಲೋಭಾಸುರ ವಧೆ. |
| ೫. ಲಂಬೋದರ | ಮೂಷಿಕವಾಹನ | ಕ್ರೋಧಾಸುರ ವಧೆ. |
| ೬. ವಿಕಟ | ಮಯೂರವಾಹನ | ಕಾಮಾಸುರ ವಧೆ. |
| ೭. ವಿಘ್ನರಾಜ | ಶೇಷವಾಹನ | ಮಮಾಸುರ ಸಂಹಾರ. |
| ೮. ಧೂಮ್ರವರ್ಣ | ಮೂಷಿಕ | ಅಹಂತಾಸುರ ಸಂಹಾರ. |

ಕಾಮ ಕ್ರೋಧಾದಿ ಅಸುರೀ ವೃತ್ತಿಗಳ ನಾಶಕ್ಕಾಗಿ ದೈವೀ ಸಂಪದದ ಹೆಚ್ಚಳಕ್ಕಾಗಿ ಮಂಗಲ ಮೂರ್ತಿಯಾದ ಗಣಪತಿಗೆ ವಂದಿಸುವೆನು.





## ಧ್ವನಿವರ್ಧಕ ಹಾಗೂ ಕೊಡೆಗಳ ನೀಡಿಕೆ ಯೋಜನೆ

ವಿವಿಧ ದೇವಾಲಯಗಳಲ್ಲಿ ಬಳಸಲು ಶ್ವೇತ ಛತ್ರಗಳು ಹಾಗೂ ಧ್ವನಿವರ್ಧಕಗಳನ್ನು ರಿಯಾಯಿತಿ ದರಗಳಲ್ಲಿ ನೀಡಲು ತಿ.ತಿ.ದೇ. ಯೋಜಿಸಿದ್ದು ಇದಕ್ಕಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ ಆಯಾ ಜಿಲ್ಲೆಗಳ ಅಸಿಸ್ಟೆಂಟ್ ಕಮಿಷನರ್ (ದೇವಾದಾಯ ಇಲಾಖೆ) ಇವರ ಮೂಲಕ ತಮ್ಮ ಅಭ್ಯರ್ಥನೆಗಳನ್ನು ಕಳುಹಿಸಬೇಕು. ಜೊತೆಗೇ ಕೊಡೆಗಳಿಗಾಗಿ ರೂ. 900/- ಹಾಗೂ/ಅಥವಾ ಧ್ವನಿವರ್ಧಕಗಳಿಗಾಗಿ ರೂ. 3370/- ಗಳ ಡಿ. ಡಿ. ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿರುವಂತೆ ಕಳುಹಿಸಬೇಕು.

ಅನುಸೂಚಿತ ಜಾತಿ, ಪಂಗಡಗಳ ಪ್ರಾಂತ್ಯಗಳಲ್ಲಿನ ದೇವಾಲಯಗಳಿಗೆ ಈ ರಿಯಾಯಿತಿ 90 ಶತಾಂಶವಾಗಿರುತ್ತವೆ.

ವಿವರಗಳಿಗಾಗಿ ಬರೆಯಿರಿ,

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ. ತಿರುಪತಿ.

ಕಲ್ಯಾಣ ಮಾಡುವನು." ಈ ವಚನದಿಂದ ಎಲ್ಲರೂ ಪ್ರಸನ್ನರಾಗಿ ತಮ್ಮ ತಮ್ಮ ಸ್ಥಾನಕ್ಕೆ ಹೊರಟುಹೋದರು.

ಕೆಲ ಸಮಯದ ನಂತರ ಅದಿತಿಯ ಗರ್ಭದಿಂದ ಮಂಗಲಮಯವೇಳೆಯಲ್ಲಿ ವಿನಾಯಕ ಭಗವವಾನ್‌ನ ಅವತಾರವಾಯಿತು. ಮೂರು ಲೋಕಗಳಲ್ಲಿ ಮಹೋತ್ಕಟನ ಆವಿರ್ಭಾವದ ಶುಭ ಸೂಚನೆಗಳಾದವು. ಅಸುರರ ಹೊರತಾಗಿ ಎಲ್ಲರೂ ಸಂತಸ ಪಟ್ಟರು. ದೇವಾಂತಕ ಮೊದಲಾದ ರಾಕ್ಷಸರು ಮಹೋತ್ಕಟನನ್ನು ಬಾಲ್ಯದಲ್ಲಿಯೇ ಕೊಂದು ಹಾಕಲು ಒಮ್ಮೆ ವಿರಜಾ ರಾಕ್ಷಸಿಯ ರೂಪದಲ್ಲಿ ಇನ್ನೊಮ್ಮೆ ಶುಕ ಗಿಳಿಯ ರೂಪದಲ್ಲಿ ರಾಕ್ಷಸರನ್ನು ಕಳಿಸಿದರು. ಆದರೆ ಅವರೆಲ್ಲರೂ ಪ್ರಭುವಿನ ಕೈಯಿಂದ ಹತರಾದರು. ಅವರಿಗೂ ಸದ್ಗತಿ ಲಭಿಸಿತು. ಆ ಮೇಲೆ ಮಹೋತ್ಕಟನು ಧೂಮ್ರಾಕ್ಷ, ಭೃಂಬಾ, ಅಂಧಕ, ನರಾಂತಕ - ದೇವಾಂತಕ ಮೊದಲಾದ ಭಯಾನಕ ಮಾಯಾವಿ ಅಸುರರನ್ನು ಹಾಗೂ ಅವರ ರಾಕ್ಷಸ ಸೇನೆಯನ್ನು ಅನೇಕ ಲೀಲೆಗಳಿಂದ ಹೊಡೆದು ಕೊಂದು ಮೂರುಲೋಕಗಳಿಗೆ ಸುಖ ಸಂತಸ ತಂದುಕೊಟ್ಟನು. ಈ ರಾಕ್ಷಸರು ಭಗವಂತನ ಕೈಯಲ್ಲಿ ಮೃತ್ಯುಪಡೆದಿದ್ದರಿಂದ ಅವರ ಉದ್ಧಾರವಾಯಿತು. ದೇವಾಂತಕನೊಡನೆ ಯುದ್ಧದಲ್ಲಿ ಪ್ರಭು ದ್ವಿದಂತದಿಂದ ಏಕ ದಂತನಾದನು. ತನ್ನ ಒಂದು ರೂಪದಿಂದ ಧುಂಡಿವಿನಾಯಕ ಎಂಬ ಹೆಸರಿನಿಂದ ಕಾಶಿಯಲ್ಲಿ ಪ್ರತಿಷ್ಠಿತಗೊಂಡು ಅಲ್ಲಿಂದ ಅಂತರ್ಧಾನ ಹೊಂದಿದನು.

### ಮಯೂರೇಶ್ವರ

ತ್ರೇತಾದಲ್ಲಿ ಗಣಪತಿಯು ಮಯೂರೇಶ್ವರ ಎಂಬ ಅವತಾರತಳೆದು ಅನೇಕ ಲೀಲೆಗಳನ್ನು ಮಾಡಿದನು. ಕಠೋರವಾದ ತಪಸ್ಸು ಮತ್ತು ಸೂರ್ಯನ ಆರಾಧನೆಯಿಂದ ವರವನ್ನು ಪಡೆದುಕೊಂಡ ಸಿಂಧುವು ಅತ್ಯಂತ ಮದೋನ್ಮತ್ತನಾಗಿ ನ್ಯಾಯ - ಸತ್ಯಧರ್ಮದ ದಾರಿಯಲ್ಲಿ ನಡೆಯುತ್ತಿರುವವರಿಗೆ ಪೀಡೆಯನ್ನು ಕೊಡಹತ್ತಿದನು. ಕಾರಣವಿಲ್ಲದೆ ನರ - ನಾರಿಯರನ್ನು ಅನಾಥ - ತಿಳಿಯದೇ ಇದ್ದ ನಿಷ್ಪಾಪಶಿಶುಗಳ ಹತ್ಯೆ ಮಾಡಿ ರಕ್ತದ ಹೊಳೆಯನ್ನು ಭೂಮಿಯ ಮೇಲೆ ಹರಿಸಿದನು. ಪಾತಾಳಕ್ಕೆ ಹೋಗಿ ಸಿಂಧುವು ತನ್ನ ಆಧಿಪತ್ಯವನ್ನು ಸ್ಥಾಪಿಸಿದನು. ಸೈನ್ಯ ಸಹಿತನಾಗಿ ಸ್ವರ್ಗಕ್ಕೆ ಹೋಗಿ ಶಚೀಪತಿ ಇಂದ್ರನನ್ನು ಸೋಲಿಸಿ ದೇವತೆಗಳನ್ನು ತನ್ನ ಅಂಕೆಯಲ್ಲಿ ಕೊಂಡು ದಾನವ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಸಿಂಧುವಿನ ಕಾಟಕ್ಕೆ ಬೇಸತ್ತ ದೇವತೆಗಳು ತಮ್ಮ ಕಷ್ಟವನ್ನು ತಮ್ಮ ಗುರುವಾದ ಬೃಹಸ್ಪತಿಯಲ್ಲಿ ತೋಡಿಕೊಂಡರು. ಬೃಹಸ್ಪತಿಯು ದೇವತೆಗಳಿಗೆ ಸಂಕಷ್ಟ ಚತುರ್ಥಿ ವ್ರತದ ಅನುಷ್ಠಾನಗೈಯಲು ತಿಳಿಸಿದನು. ಅದರಂತೆ ಸಮಸ್ತ ದೇವತೆಗಳು ಗಣಪತಿಯ ಆರಾಧನೆಗೈದು ಗಣಪತಿಯನ್ನು ಪ್ರಸನ್ನೀಕರಿಸಿಕೊಂಡರು. ಪಾರ್ವತಿಯ ಮಗನಾಗಿ ಅವತರಿಸಿ ತೊಂದರೆಯನ್ನು ನಿವಾರಿಸುವುದಾಗಿ ಅಭಯವಚನ ನೀಡಿ ಅದೃಶ್ಯನಾದನು. ಭಾದ್ರಪದ ಶುಕ್ಲ ಚತುರ್ಥಿ ದಿವಸ ಗ್ರಹ ನಕ್ಷತ್ರಗಳು ಶುಭಸ್ಥರಿದ್ದಾಗ ಉತ್ತಮ ಮಂಗಲಮಯಯೋಗದಲ್ಲಿ ವಿರಾಟರೂಪದಿಂದ ಪಾರ್ವತಿಯ ಮುಂದೆ ಪ್ರಕಟನಾದಾಗ ಪಾರ್ವತಿಯು ಪುತ್ರರೂಪದ ದರ್ಶನ ಮಾಡಿಸಲು ಹೇಳಿದನು. ತತ್ಕಾಲದಲ್ಲಿಯೇ ಸ್ಫಟಿಕ ಮಣಿ ತುಲಸಿ ಷಡ್‌ಭುಜ ಶಿಶು ಕಾಣಬಂದಿತು. ಶಿಶುವಿನ ಶೋಭೆಯು ಕಾಂತಿಮಯವಿದ್ದು ಚರಣಕಮಲದಲ್ಲಿ ಛತ್ರ ಅಂಕುಶ ಮತ್ತು ಊರ್ಧ್ವ ರೇಖಾಯುಕ್ತ ಕಮಲ ಮೊದಲಾದ ಶುಭ ಚಿಹ್ನೆಗಳಿದ್ದವು. ಅವನ ಹೆಸರು ಮಯೂರೇಶನಾಗಿತ್ತು. ಮಯೂರೇಶನ ಅವಿರ್ಭಾವದಿಂದ ಪ್ರಕೃತಿಯಲ್ಲಿ ಸರ್ವತ್ರ ದಿವ್ಯ ಆನಂದದ ಅನುಭೂತಿಯಾಗ ಹತ್ತಿತು. ಆಕಾಶದಿಂದ ದೇವತೆಗಳು ಪುಷ್ಪವೃಷ್ಟಿ ಮಾಡಹತ್ತಿದರು. ಬಾಲಕ ಮಯೂರೇಶನ ಲೀಲೆಗಳು ಆರಂಭವಾಗಿ ಎಲ್ಲರನ್ನು ಆನಂದಗೊಳಿಸುತ್ತಿದ್ದಂತೆ ಸಿಂಧುವು ಇವೆಲ್ಲವನ್ನು ಕೇಳುತ್ತ ಭಯಭೀತಗೊಂಡನು. ಈ ಬಾಲಕನ ವಧೆಗಾಗಿ ಮಾರುವೇಷದಲ್ಲಿ ಅನೇಕ ರಾಕ್ಷಸರನ್ನು ಕಳಿಸಿದನು. ಬಾಲಕ ದುಷ್ಟ ವೃತ್ರಾಸುರ ಮತ್ತು ನಾಯಿಯ ರೂಪ ಧರಿಸಿದ ನೂತನ ಎಂಬ ದೈತ್ಯನನ್ನು ವಧಿಸಿದನು. ತನ್ನ ದೇಹದಿಂದಲೇ ಅಸಂಖ್ಯ ಗಣಗಳನ್ನು ಉತ್ಪನ್ನಗೊಳಿಸಿ ಕಮಲಾಸುರನ ೧೨ ಅಕ್ಷೌಹಿಣಿ ಸೇನೆಯ ವಿನಾಶಗೊಳಿಸಿದನು. ತ್ರಿಶೂಲದಿಂದ ಕಮಲಾಸುರನ ಮಸ್ತಕವನ್ನು ಕತ್ತರಿಸಿದನು. ಅವನ ರುಂಡವು ಭೀಮಾನದಿಯ ದಂಡೆಯ ಮೇಲೆ ಹೋಗಿ ಬಿದ್ದಿತು. ದೇವತೆಗಳು ಹಾಗೂ, ಋಷಿಗಳು ಪ್ರಾರ್ಥನೆಮಾಡಿ ಗಣಪತಿಯನ್ನು ಮಯೂರೇಶ ಎಂಬ ಹೆಸರಿನಿಂದ ಪ್ರತಿಷ್ಠಾಪನೆಗೊಳಿಸಿದರು.

ದುಷ್ಟ ಸಿಂಧುವು ಎಲ್ಲ ದೇವತೆಗಳನ್ನು ಸೆರೆಮನೆಯಲ್ಲಿ ಇರಿಸಿದಾಗ ಭಗವಂತನು ದೈತ್ಯನೊಡನೆ ಹೋರಾಡಿ ಸಿಂಧುವಿನ ಪುತ್ರ ಧರ್ಮ ಮತ್ತು ಅಧರ್ಮರನ್ನು ಕೊಂದುಹಾಕಿ ಅಸುರ ಸೈನ್ಯವನ್ನು ಸೋಲಿಸಿದನು. ಕುಪಿತಗೊಂಡ ಮಾಯಾವಿ ದೈತ್ಯರಾಜನು ಅನೇಕ ಪ್ರಕಾರದ ಅಸ್ತ್ರ ಶಸ್ತ್ರಗಳಿಂದ ಮಯೂರೇಶನ ಮೇಲೆ ಪ್ರಹಾರ ಮಾಡಹತ್ತಿದನು. ಕೊನೆಗೆ ಮಹಾದೈತ್ಯ ಸಿಂಧುವು ಯುದ್ಧಕ್ಕೆ ಬಂದಾಗ ಮಯೂರೇಶನು ಸಿಂಧುವಿನ ಮೇಲೆ ಪರಶುವಿನ

ಪ್ರಯೋಗ ಮಾಡಿ ವಧಿಸಿದನು. ಅವನಿಗೆ ದುರ್ಲಭಮುಕ್ತಿ ದೊರೆಯಿತು. ದೇವಗಣವು ಮಯೂರೇಶನನ್ನು ಸ್ತುತಿಸ ಹತ್ತಿತು. ಭಗವಾನ್ ಮಯೂರೇಶನು ಎಲ್ಲರನ್ನು ಆನಂದಿತಗೊಳಿಸಿ ಸುಖಶಾಂತಿ ನೀಡಿ ಕೊನೆಗೆ ತನ್ನ ಲೀಲೆಗಳನ್ನೆಲ್ಲ ಮುಗಿಸಿ ಪರಮ ಧಾಮವನ್ನು ಸೇರಿದನು.

## ಶ್ರೀ ಗಜಾನನ

ದ್ವಾಪರಯುಗದ ಮಾತಿದು. ಚತುರ್ಮುಖ ಬ್ರಹ್ಮನು ಆನಂದಮಗ್ನನಾಗಿ ಶಯನ ಮಾಡುತ್ತಿದ್ದಾಗ ಆಕಳಿಕೆ ಬಂದು ಅದರಿಂದ ಮಹಾಘೋರ ಪುರುಷನು ಪ್ರಕಟನಾಗಿ ಗರ್ಜಿಸಹತ್ತಿದನು. ಅವನ ಗರ್ಜನೆಗೆ ಮೂರು ಲೋಕಗಳು ಕಂಪಿಸಹತ್ತಿದುವು. ಅವನು ಕೆಂಪು ಬಣ್ಣದವನಾದ್ದರಿಂದ ಅವನನ್ನು ಸಿಂಧೂರ ಎಂದು ಕರೆದು ತ್ರೈಲೋಕ್ಯ ವಿಜಯದ ವರವನ್ನು ಬ್ರಹ್ಮನು ನೀಡಿದನು. ಅವನು ಉನ್ಮತ್ತನಾಗಿ ಬ್ರಹ್ಮನೊಡನೆ ತನ್ನ ಬಾಹುಬಲ ಪರೀಕ್ಷೆಯನ್ನು ಮಾಡುವುದಾಗಿ ಹೇಳಿದಾಗ ಬ್ರಹ್ಮನು ಅಸುರನಾಗಲು ಶಾಪಕೊಟ್ಟನು. ಅಸುರನಾದ ಸಿಂಧೂರನು ತನ್ನ ಬಾಹುಬಲದ ಪ್ರಭಾವದಿಂದ ವರದ ಮಹಿಮೆಯಿಂದ ಎಲ್ಲರ ಮೇಲೆ ದಬ್ಬಾಳಿಕೆ ನಡೆಯಿಸಹತ್ತಿದನು. ವಿಷ್ಣುವಿನ ಬಳಿಗೆ ಸಿಂಧೂರನು ಹೋಗಿ ಅವನ ಅವಹೇಳನ ಮಾಡುತ್ತ ಯುದ್ಧಕ್ಕೆ ಬರಲು ವಿಷ್ಣುವಿಗೆ ತಿಳಿಸಿದಾಗ ವಿಷ್ಣುವು ಶಿವನ ಬಳಿಗೆ ಹೋಗುವಂತೆ ಸಿಂಧೂರನಿಗೆ ತಿಳಿಸಿದನು. ಅದರಂತೆ ಶಿವನ ಬಳಿಗೆ ಹೋಗಿ ಯುದ್ಧಕ್ಕೆ ಕರೆದಾಗ ಶಿವನು ಸಮಾಧಿಯಲ್ಲಿದ್ದ. ಸಿಂಧೂರನು ಮಾತೆ ಪಾರ್ವತಿಯ ಮೇಲೆ ಕುದೃಷ್ಟಿ ಬೀರಿದಾಗ ಶಿವನು ಸಮಾಧಿಯಿಂದ ಎಚ್ಚೆತ್ತು ಕ್ರೋಧಗೊಂಡು ಯುದ್ಧಕ್ಕೆ ಸಜ್ಜಾದನು. ಅತ್ತ ಪಾರ್ವತಿಯು ಮಯೂರೇಶನ ಸ್ಮರಣೆ ಮಾಡಿದಾಗ ಆತನು ಬ್ರಾಹ್ಮಣವೇಷದಲ್ಲಿ ಬಂದು ಸಿಂಧೂರನಿಗೆ ಮೋಕ್ಷ ಕೊಡುವುದಾಗಿ ತಿಳಿಸಿದನು. ಶಿವ, ಸಿಂಧೂರರ ಯುದ್ಧದಲ್ಲಿ ಸಿಂಧೂರನು ಸೋತು ಭೂಲೋಕಕ್ಕೆ ಓಡಿ ಹೋದನು. ಆ ಬ್ರಾಹ್ಮಣನು ತಾನು ಪಾರ್ವತಿಯಲ್ಲಿ ಗಜಾನನನಾಗಿ ಅವತರಿಸಿ ಈ ದುಷ್ಟನನ್ನು ವಧಿಸುವುದಾಗಿ ಹೇಳಿ ಅದೃಶ್ಯನಾದನು. ಸಿಂಧೂರನು ಭೂಲೋಕಕ್ಕೆ ಹೋಗಿ ಅಲ್ಲಿ ಅತ್ಯಾಚಾರ ಮಾಡಹತ್ತಿದನು. ಭೂಲೋಕದಲ್ಲಿ ದಾನ ಧರ್ಮಗಳು ನಿಂತವು. ದೇವತೆಗಳು ತಮ್ಮ ಗುರು ಬೃಹಸ್ಪತಿಯ ಉಪದೇಶದಂತೆ ವಿನಾಯಕನ ಸ್ತುತಿ ಮಾಡಿದಾಗ ವಿನಾಯಕನು ಪ್ರತ್ಯಕ್ಷನಾಗಿ ಆಶ್ವಾಸನೆಗೈದು ಅಂತರ್ಧಾನ ಹೊಂದಿದನು.



ಕೆಲಸಮಯದಲ್ಲಿ ಗಜಾನನನಾಗಿ ಪಾರ್ವತಿಯ ಎದುರಿಗೆ ಪ್ರತ್ಯಕ್ಷನಾದನು. ಬಲ್ಲವರು ಇವನನ್ನು ಪೂಜಿಸಿ ವಂದಿಸಿದರು. ಭಕ್ತ ವರೇಣ್ಯನ ಪತ್ನಿಯು ಹೆತ್ತ ಮಗುವನ್ನು ರಾಕ್ಷಸಿಯು ಅಪಹರಿಸಿದ್ದಾಳೆ. ವರೇಣ್ಯಪತ್ನಿಯು ಮೂರ್ಛಿತಳಾಗಿದ್ದಾಳೆ. ಅದಕ್ಕಾಗಿ ಶಿವ ಪಾರ್ವತಿಯ ಹತ್ತಿರ ಗಣಪತಿ ತನ್ನ ಭಕ್ತರ ಅನರ್ಥ ನಿವಾರಣೆಗಾಗಿ ಅಲ್ಲಿ ಇಟ್ಟುಬರಲು ತಿಳಿಸಿದನು. ಅದರಂತೆ ನಂದಿಯು ಗಣಪತಿಯನ್ನು -- ನವಜಾತ ಶಿಶುವನ್ನು, ವರೇಣ್ಯ ಪತ್ನಿಯ ಹತ್ತಿರ ಇಟ್ಟುಬಂದನು. ವರೇಣ್ಯಪತ್ನಿಯು ಈ ಅದ್ಭುತ ಬಾಲಕನನ್ನು ನೋಡಿ ಭಯಭೀತಗೊಂಡು ಇವನನ್ನು ಕಾಡಿಗೆ ಇಟ್ಟುಬರಲು ತಿಳಿಸಿದಳು. ಅದರಂತೆ ಕಾಡಿನಲ್ಲಿ ಇಟ್ಟಾಗ ಪರಾಶರರು ನೋಡಿ ಮಗುವನ್ನು ಪರಿಶೀಲಿಸಿ ದೇವಾಂಶ ಸಂಭೂತನೆಂದು ಭಾವಿಸಿ ಆಶ್ರಮಕ್ಕೆ ಒಯ್ದರು. ಪರಾಶರ ಅವರ ಪತ್ನಿ ಆರ್ಯೆಕೆಯಲ್ಲಿ ಬಾಲಕ ಗಜಾನನನು ಬೆಳೆಯಹತ್ತಿದನು. ವರೇಣ್ಯನಿಗೆ ಈ ವಿಚಾರ ತಿಳಿಯಿತು. ಅತ್ತ ಸಿಂಧೂರನ ದಬ್ಬಾಳಿಕೆ ಹೆಚ್ಚತೊಡಗಿತು. ಅತ್ಯಾಚಾರ ಪರಾಕಾಷ್ಠಕ್ಕೆ ತಲುಪಿದಾಗ ಗಜಾನನನು ಸಿಂಧೂರನ ಸಂಗಡ ಯುದ್ಧಮಾಡಿ ಸಂಹರಿಸಿ ಅವನ ರಕ್ತವನ್ನು ತನ್ನ ದೇಹಕ್ಕೆ ಲೇಪಿಸಿಕೊಂಡನು. ಸಿಂಧೂರಲೇಪಿತ ಗಜಾನನನನ್ನು ಕಂಡು ದೇವಗಣವು ಪುಷ್ಪವೃಷ್ಟಿಗೈದು ಸಂತಸವನ್ನು ಸೂಚಿಸಿತು. ರಾಜಾ ವರೇಣ್ಯ ಮತ್ತು ಅವನ ಹೆಂಡತಿ ಬಂದು ಅಜ್ಞಾನದ ಕುರಿತಾದ ಅನರ್ಥಕಾರ್ಯ ಮನ್ನಿಸಬೇಕೆಂದು ಪ್ರಾರ್ಥಿಸತೊಡಗಿದರು. ವರೇಣ್ಯನಿಗೆ ಗಣೇಶಗೀತೆ ಉಪದೇಶಿಸಿ ಕೊನೆಗೆ ಸದ್ಗತಿ ದಯಪಾಲಿಸಿದನು.

*

# ತಿರುಮಲೇಶ

---ಜಿ. ಎಸ್. ಗುಂಡಪ್ಪ.

ಶರಣು ಶರಣು ತಿರುಮಲೇಶ
ನಿನ್ನ ದಿವ್ಯ ಪಾದಕೆ
ಕರುಣೆ ದೋರಿ ನೀನು ಸಲಹು
ಕ್ಷೇಮವಿತ್ತು ಲೋಕಕೆ ೧

ಆಹ ಎಂಥ ಸೌಖ್ಯವೀವುದು
ನಿನ್ನ ಕೃಪೆಯ ಮೈಮೆಯು
ಅದನು ನಾವು ಬಣ್ಣಿಸಲ್ಕೆ
ಸಾಲದೆಮಗೆ ಶಕ್ತಿಯು ೨

ನೀನೆ ತಾಯಿ ನೀನೆ ತಂದೆ
ನೀನೆ ಗುರುವು ಮಿತ್ರನು
ಭೂಮಿಯಲ್ಲಿ ಪುಣ್ಯಶಾಲಿ
ನಿನ್ನ ಪರಮ ಭಕ್ತನು ೩

ನೀನು ಕೃಪೆಯ ತೋರಲಾಗಿ
ಮೂಕನೂ ಸಹ ನುಡಿಯುವ
ದೆಟ್ಟವನ್ನು ಹೆಳವ ಹತ್ತಿ
ವೇಗದಿಂದ ನಡೆಯುವ ೪

ನೀನೆ ರಾಮನು ನೀನೆ ಕೃಷ್ಣನು
ನೀನೆ ಬ್ರಹ್ಮನು ರುದ್ರನು
ಇದನು ಅರಿತು ಬಾಳುವಾತನೆ
ಜಗದಿ ಪುಣ್ಯ ವಂತನು ೫

ನನ್ನ ಭಕ್ತರ ಸತತ ರಕ್ಷಿಪೆ
ಎಂದು ಮಾತನು ಇತ್ತಿಹೆ
ಮುಳುಗುತ್ತಿದ್ದ ಎನಿತೊ ಭಕ್ತರ
ನೀನು ಮೇಲಕೆ ಎತ್ತಿಹೆ ೬

ನಿನ್ನ ಮೇಲಿನ ನಮ್ಮ ಭಕ್ತಿಯ
ದಿನಕು ದಿನಕು ಹೆಚ್ಚಿಸು
ನಮ್ಮಲಿರುವ ದೋಷವನ್ನು
ದೇವ ದೇಗನೆ ಕೊಚ್ಚಿಸು ೭

ನಿನ್ನ ನಾಮವು ಕಲ್ಲು ಸಕ್ಕರೆ
ಎಂದು ನುಡಿದ ದಾಸರು
ನಿನ್ನ ಭಕ್ತರು ಎಂದು ಮರೆಯದ
ಅಮಿತ ಪುಣ್ಯವಂತರು ೮

ನನ್ನ ಮನದಲಿ ನೀನು ನೆಲೆಸಿ
ನೀನೆ ಬರೆಸಿಹೆ ಈ ಪರಿ
ಸೂತ್ರ ಧಾರಿಯು ತನ್ನ ಸೂತ್ರದಿ
ಗೊಂದೆಯಾಡಿಸುವಾ ಪರಿ ೯

ನಿನ್ನ ಇಚ್ಛೆಯು ಇಲ್ಲದಿದ್ದರೆ
ತೃಣವು ಜಗದಲಿ ಚಲಿಸದು
ನೀರು ಹರಿಯದು ಗಾಳಿಬೀಸದು
ಬಿಸಿಲು ಭೂಮಿಗೆ ಬೀಳದು ೧೦

ಸರ್ಗಬೇಡೆನು ರಾಜ್ಯ ದೇಡೆನು
ಭಕ್ತಿಯೊಂದನೆ ದೇಡುವೆ
ಸಾಧುಸಂತರ ಸೇವೆಯನ್ನು
ನಿರುತ ಮಾಡ ಬಯಸುವೆ ೧೧

|| ಶರಣು ಶರಣು ತಿರುಮಲೇಶ ||





# ಶ್ರೀಕೃಷ್ಣ ಜಯಂತಿ ಸಂದೇಶ



---ಶ್ರೀ ಶ್ರೀ ಲಕ್ಷ್ಮೀವರತೀರ್ಥ ಶ್ರೀಪಾದರು.
ಉಡುಪಿ ಪರ್ಯಾಯ ಶ್ರೀಗಳು - ಶೀರೂರು ಮಠ.

ನಿರ್ಮಥ್ಯೋಗ್ರ ಭೂರ್ಣವೇ ನಿಜಮನೋಭೀಷ್ಟಂ, ದಿಶಾಮೀತೆಯಃ
ಸಮ್ಯಗ್ ಜ್ಞಾಪಯಿತಂ ಕರೇಣ ವಿಲಸತ್ ಮಂಥಾನ್ಮಮನ್ಯೇನ ಚ
ರಮ್ಯಮ್'ಧಾಮದಧನ್ ಮಹೇಶರಜತಃ ಗ್ರಾಮಶ್ರಿಯೋಲಂಕೃತಿಃ
ಕರ್ಮಂದೀಶ್ವರಭಕ್ತಿ ಬಂಧನವಶಃ ಪ್ರೀತೋಸ್ತು ಕೃಷ್ಣ ಪ್ರಭುಃ

ಶ್ರೀಕೃಷ್ಣಜನ್ಮಾಷ್ಟಮಿಯು ಭಗವದ್ಭಕ್ತರೆಲ್ಲರೂ ಆಚರಿಸುವ ವಿಶಿಷ್ಟ ಹಬ್ಬ, ಇದು ವ್ರತವೂ ಹೌದು, ಹಬ್ಬವೂ ಹೌದು. ಈ ದಿನ ಆಹಾರವನ್ನು ಪರಿತ್ಯಜಿಸಿ ಉಪವಾಸವಿದ್ದು ಶ್ರೀ ಕೃಷ್ಣ ಗುಣನಾಮರೂಪಗಳನ್ನು ಚಿಂತಿಸುತ್ತಾ ಜಪತಪ ಅನುಷ್ಠಾನಗಳ ರೂಪದಲ್ಲಿ ಶ್ರೀ ಕೃಷ್ಣನನ್ನು ಅರ್ಚಿಸುತ್ತಾ, ಭಕ್ತರು ಪಾವನರಾದೆವು ಎಂಬ ತೃಪ್ತಿಯನ್ನು ಪಡೆಯುತ್ತಾರೆ. ಶ್ರೀಕೃಷ್ಣ ಜನ್ಮಾಷ್ಟಮಿಯು ಅನೇಕ ದಿವ್ಯಭವ್ಯ ಸಂದೇಶಗಳನ್ನು ಭಾವುಕರಿಗೆ ನೀಡುತ್ತದೆ. ಭಗವಂತನು ತನ್ನ ಅವತಾರಕ್ಕೆ ಅಷ್ಟಮಿಯನ್ನು ಯಾಕೆ ಆರಿಸಿಕೊಂಡ? ಅಷ್ಟ ದಿಕ್ಕಿನಲ್ಲೂ, ನೆಲೆಸಿರುವ ದುಷ್ಟಕೂಟವನ್ನು ಸಂಹರಿಸಿ, ಶಿಷ್ಟರನ್ನು ಪರಿಪಾಲಿಸದೇಕಾಗಿ ಅಷ್ಟಮಿಯನ್ನು ಆರಿಸಿಕೊಂಡ. ತನ್ನ ಭಕ್ತರ ಹೃದಯದಲ್ಲಿ ನೆಲೆಸಿರುವ ಅನ್ನಮದ, ಅರ್ಥಮದ ಮುಂತಾದ ಅಷ್ಟಮದಗಳನ್ನು ಪರಿಹರಿಸಿ, ಜ್ಞಾನ, ಭಕ್ತಿ, ವೈರಾಗ್ಯ ಮುಂತಾದ ಸದ್ಗುಣಗಳನ್ನು ನೀಡುವ ಭರವಸೆಯೊಂದಿಗೆ ಅಷ್ಟಮಿಯೆಂದೇ ಅವತರಿಸಿದ.

ಅಷ್ಟ ದಿಕ್ಕುಗಳಲ್ಲೂ ತನ್ನ ಕೀರ್ತಿಯನ್ನು ಬೆಳಗಿಸುವ ಮೂಲಕ ಭಕ್ತರನ್ನು ಪಾವನಗೊಳಿಸುವುದು, ಈ ಅಷ್ಟಮಿಯಂದು ಅವತರಿಸಿದ ಉದ್ದೇಶವಾಗಿದೆ. ತಾನು ಸೃಷ್ಟ್ಯಾದಿ ಅಷ್ಟಕರ್ತೃತ್ವವುಳ್ಳವ, ಅಷ್ಟದಿಕ್ಪಾಲಕರ ನಿಯಾಮಕ, ಹೀಗೆ ಚಿಂತಿಸಿದಂತೆಲ್ಲಾ, ಅಷ್ಟಮಿ ಅವತಾರದ ಹಿನ್ನೆಲೆ ಎದ್ದು ಕಂಡುಬರುತ್ತದೆ. ರಾತ್ರಿಯಲ್ಲಿ ಸಂಚರಿಸುವ ಕಳ್ಳರನ್ನು ಹಿಡಿಯಲು ಅರಕ್ಷಕರು ರಾತ್ರಿಯಲ್ಲೇ ಸಂಚರಿಸುವಂತೆ, ನಿಶಾಚರರು, ದಿಶಾಚರರು ಎಂಬ ಹೆಸರುಳ್ಳ ಅಸುರರ ಕುಲವನ್ನು ದಮನ ಮಾಡಲು ರಾತ್ರಿಯಲ್ಲೇ ಶ್ರೀಕೃಷ್ಣ ಅವತರಿಸಿದ. ಕಂಸನುಳ್ಳ ಮಥುರೆಯಲ್ಲಿ ಶ್ರೀಕೃಷ್ಣನು, ಒಂದು ಕ್ಷಣವೂ ನಿಲ್ಲದೆ ಗೋಕುಲಕ್ಕೆ ತೆರಳಿದ್ದ. ಹಾಗೆಯೇ ಕಾಮಕ್ರೋಧಾದಿಗಳು ಎಂಬ ಕಂಸರು, ನಮ್ಮ ಶರೀರದಲ್ಲಿ ಇರುವ ತನಕ ಶ್ರೀಕೃಷ್ಣ ಇಲ್ಲಿ ಇರಲಾರ. ಜೀವನು ವಸುದೇವನಾದರೆ ದೇವಕಿ ಮನಸ್ಸು. ವಸುದೇವ ದೇವಕಿಯರ ತಪಸ್ಸಿನ ಫಲವಾಗಿ, ಶ್ರೀಕೃಷ್ಣನು ಅವತರಿಸಿದಂತೆ, ನಮ್ಮ ಪೂರ್ವಾರ್ಜಿತ, ಪುಣ್ಯದ ಫಲವಾಗಿ ನಮ್ಮ ಹೃದಯದಲ್ಲಿ ಶ್ರೀಕೃಷ್ಣನು ಕಾಣಿಸಿಕೊಳ್ಳುತ್ತಾನೆ. ಕಂಸನಿರುವ ಮಥುರೆಯನ್ನು ಶ್ರೀಕೃಷ್ಣನು ಬಿಟ್ಟು ಹೋದಂತೆ, ಕಾಮಕ್ರೋಧಾದಿಗಳಿಂದ ನಮ್ಮ ಹೃದಯವು ಕೂಡಿದ್ದಲ್ಲಿ, ತಕ್ಷಣ ನಮ್ಮಿಂದ ದೂರವಾಗುತ್ತಾನೆ. ಗೋಕುಲವೆಂದರೆ ಕೃಷ್ಣನಿಗೆ ಪ್ರೀತಿ. ನಮ್ಮ ಹೃದಯವು ಗೋಕುಲವಾಗಬೇಕು. ಗೋಕುಲವೆಂದರೆ ಗೋವುಗಳ ಸಮುದಾಯ ಹಾಗೂ ವೇದಗಳ ಸಮುದಾಯ ಎಂಬ ಎರಡು ಅರ್ಥವಿದೆ. ನಮ್ಮ ಹೃದಯದಲ್ಲಿ ಒಳ್ಳೆಯ ಮಾತುಗಳು, ಭಗವಂತನ ಮಹಿಮೆಗಳು, ಸತ್ಯ ಧರ್ಮ ನೀತಿ ಮುಂತಾದವುಗಳು ತುಂಬಿದಾಗ ನಮ್ಮ ಹೃದಯವು ಗೋಕುಲವಾಗಿರುತ್ತದೆ.

ನಾವು ಈ ರೀತಿ, ನಮ್ಮ ಹೃದಯವನ್ನು ಗೋಕುಲವನ್ನಾಗಿಸಿದ್ದಲ್ಲಿ ಶ್ರೀಕೃಷ್ಣನು ತಾನಾ, ಯೇ ಬಂದು ನೆಲೆಸುವನು.

ಶ್ರೀಕೃಷ್ಣನು ನಮ್ಮ ಹೃದಯದಲ್ಲಿ ಬಂದು ನೆಲೆಸಿದರೆ, ಪೂತನಾ, ಶಕಟ ತೃಣಾವರ್ತ, ಮುಂತಾದ ಎಲ್ಲಾ ಅಸುರರ ಸಂಹಾರ ತಾನಾಗಿಯೇ ಆಗುತ್ತದೆ. ವಿಪರೀತ ಜ್ಞಾನ, ಕುತರ್ಕ, ನಾಸ್ತಿಕವಾದ ಇವುಗಳು ಪೂತನ ಶಕಟಾದಿ ಅಸುರರು.

ಗೋಕುಲದಲ್ಲಿ ಶ್ರೀಕೃಷ್ಣನ ಅವತಾರದಂದು ಗೋಪಾಲಬಾಲಕರೆಲ್ಲರೂ ಹಾಲು, ಮೊಸರು, ಬೆಣ್ಣೆಗಳನ್ನು ಒಬ್ಬರಿಗೊಬ್ಬರು ಮೈಮೇಲೆ ಚೆಲ್ಲಿಕೊಂಡು ಉತ್ಸವ ಆಚರಿಸಿದರು. ಅದರ ಕುರುಹಾಗಿಯೇ ಉಡುಪಿಯಲ್ಲಿ ಶ್ರೀಕೃಷ್ಣ ಜನ್ಮಾಷ್ಟಮಿ ಮಾರನೇ ದಿನ ವಿಠಲಪಿಂಡಿ, ಮೊಸರುಕುಡಿಕೆ ಉತ್ಸವಗಳನ್ನು ಸಂಭ್ರಮದಿಂದ ಆಚರಿಸಲಾಗುತ್ತದೆ. ಗೋಪಾಲಬಾಲಕರು ಮೊಸರು ಮಡಕೆಗಳನ್ನೊಡೆದು, ಹಾಲು, ಮೊಸರು, ಬೆಣ್ಣೆಯನ್ನು ಮೈಮೇಲೆ ಹಾಕಿಕೊಂಡು ಸಂತೋಷಪಟ್ಟದ್ದನ್ನು ನೆನಪಿಸಿಕೊಳ್ಳುವುದೇ ಇದರ ಉದ್ದೇಶ.

ಶ್ರೀಕೃಷ್ಣ ಜನ್ಮಾಷ್ಟಮಿಯು, ಎಲ್ಲರಿಗೂ ಮಂಗಲವನ್ನುಂಟುಮಾಡಲಿ. ನಮ್ಮ ನಿಮ್ಮ ಎಲ್ಲರ ಹೃದಯ ಮಂದಿರದಲ್ಲಿ ಶ್ರೀಕೃಷ್ಣನು ನೆಲಸುವಂತಾಗಲಿ. ಎಲ್ಲರ ಕಷ್ಟಕಾರ್ಪಣ್ಯಗಳು ದೂರವಾಗಲಿ. ಇಷ್ಟಾರ್ಥಗಳು ಸಿದ್ಧಿಯಾಗಲಿ. ಎಂದು ಆಶಿಸುತ್ತೇವೆ.

# ಸಂತರು ಕಂಡ ಉಡುಪಿ ಕೃಷ್ಣ

---ಎಸ್. ಕೆ. ಆಚಾರ್.




**ಉಡುಪಿಯ ಕೃಷ್ಣ ಕನ್ನಡದ ಕೃಷ್ಣನೆಂದೇ ಹರಿದಾಸರಿಗೆ ಪ್ರೀತಿ. ಅವನನ್ನು ಕುರಿತು ಹಾಡದ ಹರಿದಾಸರಿಲ್ಲ. ಕೃಷ್ಣನ ಕೀರ್ತನೆಗಳು ಕನ್ನಡದಲ್ಲಿ ಅಗಣಿತವಾಗಿವೆಯೆಂದರೆ ಅದಕ್ಕೆ ಕಾರಣ ಹರಿದಾಸರಲ್ಲಿ ಉಡುಪಿಯ ಕೃಷ್ಣನ ಬಗೆಗಿದ್ದ ಭಕ್ತಿ ಪ್ರೀತಿಗಳೇ ಎನ್ನದೇಕು. ಅದರ ಒಂದು ಸಿಂಹಾವಲೋಕನ.**

ಉಡುಪಿಯ ಕಡೆಗೋಲಧಾರಿ ಬಾಲಕೃ ಭಾರತದ ಸಂತರ, ಮುಖ್ಯವಾಗಿ ಕರ್ನಾಟಕ ದಾಸವರೇಣ್ಯರ ಮನ ಸೆಳೆದ ಚಿನ್ಮಯ ಮೂರ್ತಿ ಶ್ರೀಕೃಷ್ಣನ ರಜತಪೀಠ ವಿಠಲನ ಪಂಡರಾಪು ಶ್ರೀನಿವಾಸನ ತಿರುಮಲೆ, ರಂಗನಾಥನ ಶ್ರೀರಂ ಈ ನಾಲ್ಕು ಕ್ಷೇತ್ರಗಳು, ಹರಿದಾಸರಿಗೆ ಪರ ವೈಷ್ಣವ ಕ್ಷೇತ್ರಗಳು. ಈ ಪರಮಪಾವನ ಭೂ ಕುಂಠವನ್ನು ಅತ್ಯಂತ ಸ್ಫೂರ್ತಿಯಿಂದ, ಪ್ರಭಾವ ಲಿಯಾಗಿ, ಭಕ್ತಿಭರಿತರಾಗಿ ಸ್ಥಳ ಮಹಾತ್ಮೆ ಹಾಗ ದೇವರುಗಳನ್ನು ಕೊಂಡಾಡಿದ್ದಾರೆ. ಅಪರೋ ಜ್ಞಾನಿಗಳೆಂದು ಪ್ರಸಿದ್ಧರಾದವರೆಲ್ಲಾ ಇಲ್ಲಿಗಾ ಮಿಸಿ, ಉಡುಪಿ ಕೃಷ್ಣನದರ್ಶನ ಮಾಡಿದ್ದಾರೆ. ಮ ರಿಗೊಲಿದು, ದ್ವಾರಕೆಯಿಂದ ಇಲ್ಲಿಗೆ ಬಂದು, ನಿಂ ರುವ ಕಡೆಗೋಲ ಕೃಷ್ಣನನ್ನು ದರ್ಶಿಸಿ, ತಾವನುಭ ಸಿದ ಅಪಾರ ಆನಂದವನ್ನು ಹಾಡುಗಳ ರೂಪದ ವ್ಯಕ್ತಪಡಿಸಿದ್ದಾರೆ.

ಇನ್ನು ಉಡುಪಿಯ ಕ್ಷೇತ್ರ ಮಹಾತ್ಮೆ ಶ್ರೀಕೃಷ್ಣ ಭಾವಭಂಗಿ ಸೌಂದರ್ಯ ಹಿರಿಮೆ ಮಹಿಮೆಗಳನ ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು ಪುರಂದರದಾಸರು, ಕನಕದಾಸರು, ತಮ್ಮದೇ ಆ ವಿಶಿಷ್ಟ ಶೈಲಿಯಲ್ಲಿ ಚಿತ್ರಿಸುತ್ತಾರೆ. ಅವರಲ್ಲಿ ಕೆಲವ ಶಗಳನ್ನು ಈ ಲೇಖನದಲ್ಲಿ ಕೊಡಲಾಗಿದೆ.

**ಶ್ರೀಪಾದರಾಜರು ಕಂಡ ಶ್ರೀಕೃಷ್ಣ :** ಧ್ರುವಾ ಶರಾದ ಶ್ರೀಪಾದರಾಜರು ತಮ್ಮ ಜೋಗುಳದ ಹಾಡೊಂದರಲ್ಲಿ "ಉಂಗುರ ಕರದಿಂದ ಗೋಪಮ ತನ್ನ ಶೃಂಗಾರದ ಮಗನ ಎತ್ತಿ" ರಂಗವಿಠಲನ ಉಡುಪಿಯ ಉತ್ತುಂಗ ಕೃಷ್ಣನ ಗೊಲ್ಲತಿಯರೊ ಡಗೂಡಿ ತೂಗಿದಳು ಎನ್ನುತ್ತಾರೆ.

**ವ್ಯಾಸರಾಜರು ಬಣ್ಣಿಸಿದ ಚೆಣ್ಣಕೃಷ್ಣ :** ಪ್ರಹ್ಲಾದಾಂ ಶರಾದ ವ್ಯಾಸರಾಜರು "ಕನಸಿನಲ್ಲಿ ಕಂಡ ಹರಿ" ಎಂಬ ಪದ್ಯದಲ್ಲಿ ಬಾಲಕನು ಕರೆಯೆ, ಕಂಬವೊ ಡೆದು ಬಂದೆ, ಬಾಲಕನನ್ನು ತಂದು ಸಾಂದೀಪ ರಿಗೆ ನೀಡಿದೆ, ಬಾಲೆ ದ್ರೌಪದಿಯು ಚೀರಲು ಅಕ್ಷ ಯಾಂಬರವನ್ನು ನೀಡಿದೆ ಎಂಬುದಾಗಿ ಹೇಳಿದ್ದಾರೆ. ಇನ್ನೊಂದೆಡೆ ಶ್ರೀಕೃಷ್ಣನ ಸೌಂದರ್ಯವನ್ನು ವರ್ಣಿ ಸುತ್ತಾ, ಚಂದ್ರನಂತಹಾ ಮುಖ, ಚೆಲುವಾದ ಕಣ್ಣು, ನೀಳವಾದ ನಾಸಿಕ, ನೊಸಲಲ್ಲಿ ಸಿರಿನಾಮ ಮತ್ತು ಕಸ್ತೂರಿ ತಿಲಕಧಾರಿಯಾದ ತೇಜಃ ಪುಂಜವಾದ ಕೃಷ್ಣನನ್ನು ಕಂಡೆ ಎನ್ನುತ್ತಾರೆ. ಇನ್ನೊಮ್ಮೆ ಶ್ರೀಕೃಷ್ಣನ ಶ್ರೀಚರಣದ ಮಹಿಮೆಯನ್ನು ವರ್ಣಿಸುತ್ತಾ ಶಂಕೆ ಯಿಲ್ಲದೆ ಶಕಟನ ತುಳಿದವಾದ, ಬಿಂಕದಿಂದಲಿ ಕಾಳಿಂಗನ ಶಿರದಲ್ಲಿ ನಲಿದವಾದ, ಮರುಳ ಕೌರ

ವನ ಧರೆಗೆ ಕೆಡಹಿದ ಪಾದ, ಶರಣರು ಸೇವಿಸುವ ಶ್ರೀಪಾದ, ನಿರತ ಮಧ್ವಮುನಿಗಳು ಸೇವಿಪಪಾದ, ಮಧ್ವಾಂತರ್ಗತ ಕೃಷ್ಣ ನಿನ್ನ ಚರಣ ಸರೋಜಗಳಿಗೆ ನಮೋ ಎನ್ನುತ್ತಾರೆ. ಇನ್ನೊಂದೆಡೆ ಮಧುರೆಯಿಂದ ಮಾವನ ಕೊಂದು ದ್ವಾರಕಾಧೀಶ ಕೈಯಲಿ ಕಡೆಗೋಲು ನೇಣು ಹಿಡಿದುಕೊಂಡು, ಹಡಗಿನ ಮೂಲಕ ಕಡಲಶಯನ ಪೊಡವಿಗೊಡೆಯ ಕೃಷ್ಣ ಉಡುಪಿಲಿ ನೆಲಸಿ, ಬಿಡದೆ ಪೂಜೆಗೊಂಬ ಎನ್ನುತ್ತಾರೆ.

ವಾದಿರಾಜರು ಚಿತ್ರಿಸಿದ ಬಾಲಕೃಷ್ಣ : ಒಟ್ಟು ೧೨೦ ವರ್ಷಗಳ ಪೂರ್ಣಾಯುಷ್ಯ ಅಂದರೆ (೧೪೮೦-೧೬೦೦) ಶಾರ್ವರಿ ಸಂವತ್ಸರದ ಮಾಘ ಶುದ್ಧ ದ್ವಾದಶಿಯಿಂದ, ಶಾರ್ವರಿ ಸಂವತ್ಸರದ ಪಾಲ್ಗುಣ ಕೃಷ್ಣ ತದಿಗೆ ವರೆಗೆ, ತುಂಬು ಜೀವನ ನಡೆಸಿ ವಾದಿರಾಜರು ಕೃತಾರ್ಥರಾದರು. ಹಯಗ್ರೀವ ದೇವರ ಪೂರ್ಣಾನುಗ್ರಹಕ್ಕೆ ಪಾತ್ರರಾದ ವಾದಿರಾಜರು ೧೧೨ ವರ್ಷಕ್ಕೂ ಮಿಕ್ಕಿದ ತನ್ನ ಯತಿ ಜೀವನವನ್ನು ಮನುಕುಲದ ಇಹಪರ ಜನ್ಮಗಳ ಒಳಿತಿಗಾಗಿ ಅರ್ಪಿಸಿಕೊಂಡರು. ಇವರು ತಪಸ್ಸು, ಸದ್ಗುಣಗಳ ಗಣಿ ಆಗಿದ್ದರು. ಮಟ್ಟು ಗ್ರಾಮದ ಜನರಿಗೆ, ಜೀವನ ನಿರ್ವಹಣೆಗಾಗಿ ಉತ್ತಮ ತಳಿಯ ಗುಳ್ಳದ ಬೀಜಗಳನ್ನು ನೀಡಿದರು. ಇಂದಿಗೂ ಈ ಗುಳ್ಳದ ಪಾಕ, ಇತರೆಲ್ಲ ಗುಳ್ಳಗಳಿಗಿಂತ ಸ್ವಾದಿಷ್ಟ. ಅಪೂರ್ವ ವಾಗ್ವಿಲಾಸ, ಮಂತ್ರಶಕ್ತಿಗಳಿಂದ ತನ್ನ ಆರಾಧ್ಯ ದೈವ ಕೃಷ್ಣನನ್ನು ತುಳು, ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಪದ್ಯ, ಸ್ತೋತ್ರ ಗ್ರಂಥಗಳ ರಚನೆ ಮೂಲಕ, ಹಾಡಿಕೊಂಡಾಡಿ, ಶ್ರೀ ಸಾಮಾನ್ಯರ ಹಾಗೂ ವಿದ್ವಜ್ಜನರ ಸೇವೆಯನ್ನು ಅಸಮಾನ್ಯವಾಗಿ ಮಾಡಿರುತ್ತಾರೆ. ತೌಳವ ದೇಶಕ್ಕೆ ಬಂದ ಕೃಷ್ಣ, ಎಂಬ ಕನ್ನಡ ಪದ್ಯಗಳಲ್ಲಿ, ಶ್ರೀಕೃಷ್ಣನ ಆಗಮನ, ಸೌಂದರ್ಯ, ನಿತ್ಯ ಪಂಚಾಮೃತಾದಿ ಅಭಿಷೇಕಗಳು ಅಲಂಕಾರ, ಧೂಪ, ದೀಪ, ನೈವೇದ್ಯಾದಿಪೂಜಾ ವರ್ಣನೆಗಳನ್ನು ಅತೀ ಮನೋಜ್ಞ, ಚುರುಕು ಸರಳ, ಸ್ಪಷ್ಟ ರೀತಿಯಿಂದ ಮಾಡಿರುತ್ತಾರೆ. "ಇಂದ್ರ ಲೋಕವಪ್ಪೊಲ್ವ" ದ್ವಾರಕೆಯಿಂದ ನಮ್ಮನ್ನು ಸಲಹಲು, ಸಿಂಧುವಿನ ಮಾರ್ಗವಾಗಿ, ಕೃಷ್ಣನು ತುಳುನಾಡಿಗೆ ಬಂದು, ಮಧ್ವಮುನಿಗಳಿಂದ ಪೂಜೆಗೊಂಡ, ಇಂತಹಾ ನಗುಮೊಗದ ಕೃಷ್ಣನನ್ನು ಸೇವಿಸುವವರ ಸಿರಿ ಹೆಚ್ಚಲಿ. ಬಾಲಕೃಷ್ಣನು ಒಂದು ಕೈಯಲ್ಲಿ ಕಡೆಗೋಲು, ಇನ್ನೊಂದರಲ್ಲಿ ಹಗ್ಗ ಧರಿಸಿದ್ದಾನೆ. ಚಂದ್ರನಂತಹಾ ಸುಂದರ ವದನನಾದ ಕೃಷ್ಣನನ್ನು ನೋಡಿದವರು ಧನ್ಯರು. ಶ್ರೀಕೃಷ್ಣನಿಗೆ ಪ್ರತಿದಿನ ಘೃತ, ಹಾಲು, ಮೊಸರು, ಜೇನು, ಎಳನೀರುಗಳಿಂದ ಪಂಚಾಮೃತ ಅಭಿಷೇಕ ನಡೆಯುತ್ತದೆ. ಆ



ಬಳಿಕ ಅಗ್ನಿಸೂಕ್ತ, ಪುರುಷಸೂಕ್ತ, ಮಂತ್ರಗಳನ್ನು ಪಠಿಸುತ್ತಾ ಕಲಶಸ್ನಾನ, ನಂತರ ವಸ್ತ್ರಗಂಧ ಚಿನ್ನಾಭರಣಗಳಿಂದ ತುಳಸಿ, ಪುಷ್ಪಗಳಿಂದ ಭಕ್ತಿ ಭರಿತರಾದ ಯತಿಗಳು ಬಾಲಕೃಷ್ಣನ್ನು ಅಲಂಕರಿಸಿ ಆರಾಧಿಸುತ್ತಾರೆ. 'ದೇವಕೃಷ್ಣಾ, ನಿನ್ನೆದುರು ನಿತ್ಯ ಸಪ್ತಾವರಣಪೂಜೆ, ಸ್ತೋತ್ರಗಾನ, ನೈವೇದ್ಯ ದೂಪ, ದೀಪ, ರತ್ನದ ಆರತಿ, ಚತ್ರಚಾಮರ, ನೃತ್ಯ ಗೀತಾದಿ ಉತ್ಸವಗಳು ಅಹರ್ನಿಶಿ ನಡೆಯುತ್ತವೆ.' ರಮೆಯ ಅರಸನಾದ ಕೃಷ್ಣನಿಗೆ ಅಪ್ಪ ಮೊದಲಾದ ಭಕ್ಷ್ಯಗಳನ್ನು ತುಪ್ಪ ದೆರೆಸಿದ ಪಾಯಸವನ್ನೂ, ವಿವಿಧ - ಶಾಖ, ದೆಲ್ಲ ರಸಭರಿತ ಪಕ್ವ ಫಲಾದಿಗಳನ್ನು ಯೋಗಿಗಳು ಪ್ರತಿನಿತ್ಯ ಅರ್ಪಿಸಿ ಅರ್ಚಿಸುತ್ತಾರೆ. ಸಹಸ್ರಾರು ದೀಪಗಳು ಅಚ್ಯುತನ ಎರಡು ಭಾಗಗಳಲ್ಲಿ ನೀಲ ಮಣಿಗಳಂತೆ ಶೋಭಿಸುತ್ತವೆ. ಶ್ರೀಕೃಷ್ಣನ ಸೇವೆಯಿಂದ ಸುಜನರ ದುರಿತಗಳು ನಾಶವಾಗಲಿ, ಸಿರಿ ಸಂಪತ್ತುಗಳು ಹೆಚ್ಚಲಿ ಎಂದು ರಾಜರು ಪ್ರಾರ್ಥಿಸಿದ್ದಾರೆ. ಶ್ರೀಕೃಷ್ಣ ಮಠದಲ್ಲಿ ಈಗ ನಡೆಯುವ ನಿತ್ಯ ಪೂಜೆಗಳನ್ನು ಅವಲೋಕಿಸಿದಲ್ಲಿ ೫೦೦ ವರ್ಷಗಳ ಹಿಂದೆ ರಾಜರು ಚಿತ್ರಿಸಿದ ರೀತಿಯಲ್ಲೇ ಪೂಜಾದಿಗಳು ನಡೆಯುವುದನ್ನು ನಾವು ಇಂದು ಕೂಡಾ ಸ್ಪಷ್ಟವಾಗಿ ಗಮನಿಸಬಹುದು.

ರಾಜರು ಇನ್ನೊಂದೆಡೆ, ಲೋಕಭರಿತನೂ, ಅನೇಕ ಚರಿತನೂ ಆದ ಕೃಷ್ಣನು ರಾಜಸೂಯ ಯಾಗದಲ್ಲಿ ಪ್ರಥಮ ಗೌರವಕ್ಕಾಗಿ ರಾಜ ರಾಜಾದಿಗಳಿಂದ ಮಾನ್ಯತೆಗೊಂಡಿದ್ದರೂ, ಜ್ಞಾನಶೂನ್ಯವಾಗಿ ಸೊಕ್ಕಿ ತಾನೇ ವಾಸುದೇವನಿಗೆ ಮಿಗಿಲು ಎಂದ ಶಿಶುಪಾಲನನ್ನು ತರಿದು, ತನ್ನ ಸೇವಕ ಜನರಿಗೊಲಿದು, ಉನ್ನತ ಉಡುಪಿಯಲ್ಲಿ ಘನ್ನ ಮಹಿಮೆಯಿಂದ ಹಯವದನ ಕೃಷ್ಣ ನಿಂತಿದ್ವಾನೆ ಎನ್ನುವರು. ತುಳಸಿ ಪೂಜೆಗಾಗಿ ವಾದಿರಾಜರು ಉಡುಪಿ ಶ್ರೀಕೃಷ್ಣನಿಗೆ ಅಂಕಿತವಾದ ಹಲವಾರು ಕೀರ್ತನೆಗಳನ್ನು ರಚಿಸಿದ್ದಾರೆ. ಮಲ್ಲರನ್ನು ಕರೆಸಿ ಕಂಸನು ಕೃಷ್ಣನನ್ನು ಕೊಲ್ಲಲು ಹವಣಿಸಿದಾಗ ಮಲ್ಲರಮಲ್ಲ ಉಡುಪಿ

ಕೃಷ್ಣ ಕಂಸನನ್ನೇ ಕೊಲ್ಲುತ್ತಾನೆ. ಶಕಟಾಸುರನನ್ನು ಒದ್ದ ನೀನು ಆದಿಗುರು ಮಧ್ವಾಚಾರ್ಯರ ಮುದ್ದು ಕೃಷ್ಣನಾಗಿರುವಿ. ಹೇ ಪಾರ್ಥಸಾರಥಿ ಕೃಷ್ಣಾ ಸದ್ಗುರು ಮುನಿ ವಾದಿರಾಜರ ಕೃಷ್ಣ ನಮ್ಮನ್ನು ಸಲಹು ಎನ್ನುತ್ತಾರೆ.

ಪುರಂದರದಾಸರು ಕಂಡ ಕೃಷ್ಣ : ನಾರದಾಂಶರಾದ ಪುರಂದರದಾಸರು ಶ್ರೀಕೃಷ್ಣನ ಮೇಲೆ ಸಹಸ್ರಾರು ಪದ್ಯಗಳನ್ನು ರಚಿಸಿದ್ದಾರೆ. ಒಂದೆಡೆ ಶಂಖ ಚಕ್ರವ ಪಿಡಿದಿಹ ತಾನು ಬಲು ಬಿಂಕದಲಿ ಕೊಳಲೂದುವನು ಎಂದಿದ್ದಾರೆ. ಇನ್ನೊಮ್ಮೆ ಕಂಡ ಖಳರ ಗಂಡ ಹಡಗೇರುತಬಂದ, ಬಿಡದೆ ಉಡುಪಿಲಿ ನಿಂದ ಒಡೆಯ ಪುರಂದರ ವಿಠಲ ಚಂದ ಎಂದಿದ್ದಾರೆ. ಅವರು ಸಮುದ್ರ ಸ್ನಾನಾದಿಗಳನ್ನು ಮಾಡಿ, ಚಂದ್ರ ಮೌಳೀಶ್ವರನ ಚರಣಕೆರಗಿ, ಅನಂತೇಶ್ವರನ ಕಂಡು, ಹನುಮಂತನ ಪಾಡಿ ಕಂಡೆನಾ ಕೃಷ್ಣರಾಯನಾ ಎಂದಿದ್ದಾರೆ. ಇನ್ನೊಂದೆಡೆ ಮಧ್ವ ಸರೋವರವ ಕಂಡೆ ಮಧ್ವಮತವಾ ಅಷ್ಟಮುನಿಗಳ ಕಂಡೆ, ಪ್ರಸಿದ್ಧವಾಗಿರುವ ಉಡುಪಿ ಕೃಷ್ಣನಾ ಕಂಡೆ ಎನ್ನುತ್ತಾರೆ. ವಾದಿರಾಜ, ಕನಕದಾಸರ ಸಮಕಾಲೀನರಾದ ಪುರಂದರದಾಸರು, ಸ್ವಯಂವಾದಿರಾಜರೇ ಶ್ರೀಕೃಷ್ಣನ ಮುಂದೆ ನಿಂತು ಚಾಮರ ಪೂಜೆ ಸಂಧ್ಯಾಕಾಲದಲ್ಲಿ ಮಾಡುವುದನ್ನು ಕಂಡು "ನೋಡ ಬನ್ನಿರೋ ಜನರು ದೀವಟಿಗೆ ಸೇವೆಯನು" ಎಂಬ ತಮ್ಮ ಪದ್ಯದಲ್ಲಿ ಚೆನ್ನಾಗಿ ವರ್ಣಿಸಿದ್ದಾರೆ. "ಅಂಜಿಕೆ ಪರಿಹಾರ ಅಸುರ ಭಂಜನನಾದ ಕಂಜಾಕ್ಷ ಶ್ರೀಕೃಷ್ಣನಿದಿರಲಿ ಪ್ರತಿ ಸಂಜೆ ನಡೆಯುತ್ತಿದೆ" ಎನ್ನುತ್ತಾರೆ. ಬಟ್ಟಲವೀಳ್ಯೆ ವಿಶಿಷ್ಟರಾಜಾಕ್ಷತ, ಪುಟ್ಟಕದಳಿ, ಬೆಲ್ಲ ಮುಂತಾದವುಗಳನ್ನು ಕೃಷ್ಣರಾಯನ ಮುಂದಿಟ್ಟು ಸಮರ್ಪಿಸಿ, ಶ್ರೇಷ್ಠರಾದ ಯತಿ ವಾದಿರಾಜರು ಶ್ರೀಕೃಷ್ಣನಿಗೆ ಆರತಿ ಎತ್ತುವರು ಎಂದಿದ್ದಾರೆ. ಸುಮಾರು ೪೦೦ ವರ್ಷಗಳ ಹಿಂದೆ ಪುರಂದರದಾಸರು ಕಂಡು ವರ್ಣಿಸಿದ ಈ ಪೂಜೆ ತದೇಕ ರೀತಿಯಲ್ಲಿ ಇಂದು ಕೂಡಾ ರಾತ್ರಿ ೭.೧೫ಕ್ಕೆ ನಡೆಯುವುದನ್ನು ನಾವು ಕಾಣಬಹುದು.

ಕನಕದಾಸರ ಕೃಷ್ಣ : ಯಮಾಂಶರಾದ ಕನಕದಾಸರು ಆದಿಕೇಶವನ ನೆಲೆವೀಡಾದ ಬಾಡದಿಂದ ಶ್ರೀರಂಗ, ಉಡುಪಿ, ಪಂಡರಪುರ, ತಿರುಮಲೆ ಅಂತ ತಿರುಗುತ್ತಲೆ ಇದ್ದರು. ಕನಕನ ಕಿಂಡಿಯ ಎಮರಗಡೆ, ಕನಕದಾಸರ ಶಿಲಾಮಯ ವಿಗ್ರಹ ಹಾಗೂ ಮಂಟಪಗಳಿವೆ. ಕಾರುಣ್ಯನಿಧಿ ವಾರಿಜನಾಭ ಮುದ್ದುಕೃಷ್ಣನನ್ನು ದ್ರೌಪದಿಗೆ ಅಕ್ಷಯ ಬಟ್ಟೆ ನೀಡಿ ಕಾಯ್ದೆ, ಎಲಾ ಪಿನಾಕಿಸಖ ಆದಿಕೇಶವಾ, ಉಡುಪಿ ಕೃಷ್ಣ, ನನ್ನನ್ನು ಕಾಪಾಡು ಎನ್ನುತ್ತಾರೆ.

ಸುಲಭ ಪ್ರಸನ್ನ ಬಾಲಕೃಷ್ಣ : ಕಡೆಗೋಲ ಕೃಷ್ಣನು, ಉಡುಪಿಯಲ್ಲಿ ಬಾಲಕೃಷ್ಣನಾಗಿ ಲೋಕಾನುಗ್ರಹ ಗೈಯುತ್ತಿದ್ದಾನೆ. ಯಾವತ್ತೂ ಮಗುವನ್ನು ಒಲಿಸುವುದು ಸುಲಭ ಕಾರ್ಯ ಏಕೆಂದರೆ ಮಗುವು ಅಲ್ಪತೃಪ್ತಿ ಹೊಂದುವುದು. ಈ ವಿಚಾರವನ್ನೇ ಮನಸ್ಸಿನಲ್ಲಿಟ್ಟುಕೊಂಡು ಶ್ರೀ ವಾದಿರಾಜರು ತಮ್ಮ ರು[...] ಣೇಶ ವಿಜಯದಲ್ಲಿ ಈ ಶ್ಲೋಕ ರಚಿಸಿದ್ದಿರಬೇಕು.

ಶಿಶು ವಶೀಕರ್ತುಮಥೋ ನ ಭಾರ
ಇತೀವ ಬುದ್ಧ್ಯಾ ತುತುಪುಃಸ್ಮವೃದ್ಧಾಃ
ಉಪೇಕ್ಷಯಿಷ್ಯಂತಿ ನ ಜೇತ್ ಕೃತಾರ್ಥಾ
ಇತಿ ಸ್ವಯಂ ಪ್ರಾಜ್ವಲದಗ್ನಿ ರೇಷಾಮ್

ಋಷಿ, ಮುನಿಗಳೆಲ್ಲಾ ಸೇರಿ, ದುಷ್ಟ ಶಿಕ್ಷ[...] ಹಾಗೂ ಶಿಷ್ಟ ರಕ್ಷಣೆಗಾಗಿ, ಶ್ರೀಕೃಷ್ಣನ ಅವತರಕ್ಕಾಗಿ ಅನೇಕ ಯಜ್ಞ ಯಾಗಾದಿಗಳನ್ನು ಅ[...] ಮೂಲಕ ಗೈದು ದೇವತೆಗಳಿಗೆ ಹವಿಸ್ಸನ್ನು ನೀಡ[...]ತ್ತಾರೆ. ಆಗ ಪ್ರಸನ್ನನಾದ ದೇವರು ಶ್ರೀಕೃ[...] ರೂಪದಲ್ಲಿ ಜನಿಸಿದ್ದಾನೆ. ಶಿಶುವನ್ನು ವಶೀಕರಿಸ[...]ವುದು ಸುಲಭಸಾಧ್ಯ. ಇನ್ನೇಕೆ ಯಜ್ಞ ಯಾಗಾ[...]ಗಳು, ಎಂದು ಎಲ್ಲಿ ಯಜ್ಞಯಾಗಾದಿಗಳನ್ನು ಋ[...]ಗಳು, ನಿಲ್ಲಿಸುವರೋ ಎಂಬ ಭಯದಿಂದ ಅಗ್ನಿಯ[...] ತನಗೆ ಆಹುತಿ ಬೇಕೆಂಬುದಕ್ಕಾಗಿ ತಂತಾನೆ ಪ್ರ[...]ಲಿಸಿ ಉರಿಯುತ್ತಾನೆ ಎಂದು ಮಾರ್ಮಿಕವಾಗಿ ವಾ[...]ರಾಜರು ಇಲ್ಲಿ ಚಿತ್ರಿಸಿದ್ದಾರೆ. ಅಂದರೆ ಬಾಲರೂ[...] ಕೃಷ್ಣನನ್ನು ಸುಲಭವಾಗಿ ಅಲ್ಪ ಸೇವೆ ಕಾಣಿಕೆಗಳಿಂ[...] ತೃಪ್ತಿಪಡಿಸಬಹುದು. ಎಂದು ಸೂಚ್ಯವಾಗಿ ತಿಳಿ[...]ದ್ದಾರೆ. ಆದ್ದರಿಂದ ನಾವೆಲ್ಲರೂ ಇಂತಹಾ ಸುಲ[...] ಸಾಧ್ಯನಾದ ವಾದಿರಾಜರ ಅರಾಧ್ಯದೈವ ಉಡು[...] ಕಡೆಗೋಲ ಬಾಲಕೃಷ್ಣನನ್ನು ಸೇವಿಸಿ ಕೃತಾರ್ಥರಾಗೋಣ; ✻

# ಭ್ರಮರಗೀತೆ

**---ಕೆ. ಆರ್ ಗೋಪಾಲಕೃಷ್ಣ.**

"ಭ್ರಮರಗೀತೆ" ಎಂಬ ಲಘು ವಿಭಾಗವು ಶ್ರೀಮದ್ಭಾಗವತ ಮಹಾಪುರಾಣದ ಹತ್ತನೇ ಸ್ಕಂಧದ ನಲವತ್ತೈದನೆ ಅಧ್ಯಾಯದಲ್ಲಿ ಉಕ್ತವಾಗಿದೆ. ಇದರಲ್ಲಿ ಗೋಪಿಕಾಸ್ತ್ರೀಯರು ಶ್ರೀಕೃಷ್ಣನ ವಿರಹದಿಂದ ಬಹಳ ದುಃಖಿತರಾಗಿರುವಾಗ, ಅಲ್ಲಿಗೆ (ಗೋಕುಲಕ್ಕೆ) ಶ್ರೀಕೃಷ್ಣನ ದೂತನಾಗಿ ಉದ್ಧವ ನಂದಗೋಪನ ಮನೆಗೆ ಬರುತ್ತಾನೆ.

ಮಧುರೆಯಿಂದ ಶ್ರೀಕೃಷ್ಣನು ತನ್ನ ತಂದೆ ತಾಯಿಗಳಿಂದ ಯಶೋದಾನಂದ ಗೋಪರಿಗೆ ತನ್ನ ಕ್ಷೇಮ ಸಮಾಚಾರವನ್ನು ತಿಳಿಸಿ, ಎಲ್ಲರ ಕ್ಷೇಮ ಸಮಾಚಾರವನ್ನು ತಿಳಿದುಕೊಂಡು ಬರುವಂತೆ ಉದ್ಧವನನ್ನು ಅವರ ಬಳಿಗೆ ಕಳುಹಿಸಿಕೊಟ್ಟಿರುತ್ತಾನೆ.

ಗೋಕುಲದ ಗೋಪಿಕೆಯರು ಉದ್ಧವನು ತಮ್ಮ ಸ್ವಾಮಿಯಾದ ಶ್ರೀಕೃಷ್ಣಪರಮಾತ್ಮನ ದೂತನೆಂದು ತಿಳಿದು ಅವನನ್ನು ಉಚಿತಾಸನದಲ್ಲಿ ಕುಳ್ಳಿರಿಸಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸುತ್ತಾರೆ.

ಉದ್ಧವನು ಕೇವಲ ಕೃಷ್ಣನ ತಂದೆ ತಾಯಿಯವರನ್ನು ವಿಚಾರಿಸಲು ಬಂದಿರಬಹುದೆ? ಇತರರ ಯೋಗಕ್ಷೇಮ ಕೃಷ್ಣ ವಿಚಾರಿಸಬಹುದೆ? ನಮ್ಮ ಸ್ವಾಮಿಯಾದ ಹದಿನಾಲ್ಕು ಲೋಕದ ಒಡೆಯನಾದ ಶ್ರೀಕೃಷ್ಣಪರಮಾತ್ಮನನ್ನು ನಾವು ಸದಾ ಆರಾಧನೆ ಮಾಡುತ್ತಿರುವಾಗ ನಮ್ಮ ಜ್ಞಾಪಕ ಅವನಿಗೆ ಬಂದಿರಬಹುದೆ? ಅವನಿಗೆ ತನ್ನ ತಂದೆ ತಾಯಿಗಳ ಹೊರತಾಗಿ ಬೇರ್ಯಾರೂ ಪ್ರೀತಿ ಪಾತ್ರರುಗಳಿಲ್ಲವೆ ? ತಂದೆ ತಾಯಿಯವರನ್ನು ಮುನಿಗಳೂ ಮರೆಯದೇ ಇರುವಾಗ ಶ್ರೀಕೃಷ್ಣನೂ ಕೇವಲ ಅಂತಹ ಗುಣವಿದ್ದೀತೆ? ಅವನು ಎಲ್ಲರಂತಲ್ಲ. ಅವನು ಪರಮಾತ್ಮ ಆದರೂ ಲೋಕವಿಡಂಬನೆಗಾಗಿ, ಖಿನ್ನರಾಗಿ ಆಕ್ಷೇಪಿಸುವ ಧ್ವನಿಯಲ್ಲಿ ಉದ್ಧವನ ಬಳಿಗೆ ಬಂದು, ಒಂದು ದುಂಬಿಯನ್ನು ಸಂಬೋಧಿಸಿ, ತಮ್ಮ ಪ್ರಿಯತಮನನ್ನು ನಿಂದಿಸುವ ಮೂಲಕ ಅವನಲ್ಲಿ ತಮಗಿರುವ ದೃಢವಾದ ಭಕ್ತಿಯನ್ನು ತೋರ್ಪಡಿಸುವರು. ಎಲ್ಲವನ್ನು ಸಮಾಧಾನಚಿತ್ತದಿಂದ ಕೇಳಿದ ಉದ್ಧವನು, ಅವರನ್ನು ಕೊನೆಯಲ್ಲಿ ಈ ಮಾತುಗಳಿಂದ ಸಂತೈಸುತ್ತಾನೆ--

ಭಕ್ತಿಃ ಪ್ರವರ್ತಿತಾ ದಿಷ್ಟ್ಯಾ
ಮುನೀನಾಮಪಿ ದುರ್ಲಭಾ

ಎಲೈ ಗೋಪಿಕಾಸ್ತ್ರೀಯರೇ, ನೀವು ಕೀರ್ತಿವಂತನಾದ ಶ್ರೀಕೃಷ್ಣನಲ್ಲಿ ಮುನಿಗಳಿಂದಲೂ ಮಾಡಲಾಗದ ಭಕ್ತಿಯನ್ನು ಮಾಡಿದ್ದೀರಿ. ಇದು ಸಂತೋಷದ ವಿಷಯ ಎನ್ನುತ್ತಾನೆ. ಜೊತೆಗೇ ಹೇಳುತ್ತಾನೆ -- ನಿಮ್ಮ ಮನಸ್ಸು ಶ್ರೀಕೃಷ್ಣನಲ್ಲಿ ಸದಾ ತನ್ಮಯವಾಗಿ ನೆಟ್ಟಿರುವುದರಿಂದ ನೀವು ಲೋಕ ಮಾನ್ಯರು, ಧನ್ಯರೂ ಆಗಿರುವಿರಿ.

ದಿಷ್ಟ್ಯಾಪುತ್ರಾನ್ ಪತೀನ್
ದೇಹಾನ್ ಸ್ವಜನಾನ್ ಭವನಾನಿ ಚ
ಹಿತ್ವಾ ವೃಣೀತ ಯೂಯಂ
ಯತ್ಕೃಷ್ಣಾಖ್ಯಂ ಪುರುಷಂ ಪರಮ್

ನೀವು ಮಕ್ಕಳು, ಗಂಡಂದಿರು, ಬಂಧುಗಳು, ಮನೆಗಳನ್ನು ತ್ಯಜಿಸಿ ದೇಹವನ್ನು ಲೆಕ್ಕಿಸದೆ ಪುರುಷೋತ್ತಮನಾದ ಶ್ರೀಕೃಷ್ಣನನ್ನು ವರಿಸಿರುವುದರಿಂದ ಅವನ ಶಾಶ್ವತವಾದ ಅನುಗ್ರಹಕ್ಕೆ ಪಾತ್ರರಾಗಿದ್ದೀರಿ ಎಂದು ಸಂತೈಸುತ್ತಾನೆ ಕೊನೆಯಲ್ಲಿ ಗೋಕುಲದ ಗೋಪಿಕಾಸ್ತ್ರೀಯರು ಸಂತುಷ್ಟರಾಗುತ್ತಾರೆ. ಇಷ್ಟು ಕಥಾಭಾಗ ಭಾಗವತದ ದಶಮಸ್ಕಂಧದ ನಲವತ್ತೈದನೆ ಅಧ್ಯಾಯದಲ್ಲಿ ಉಕ್ತವಾಗಿದೆ. ಗೋಪಿಕಾಸ್ತ್ರೀಯರು ತಮ್ಮ ವಿರಹ ವೇದನೆಯನ್ನು ನೇರವಾಗಿ ಉದ್ಧವನ ಮುಂದೆ ಹೇಳಿದೆ ಒಂದು ದುಂಬಿ (ಭ್ರಮರ)ಯನ್ನುದ್ದೇಶಿಸಿ ಮಾರ್ಮಿಕವಾಗಿ ನಿಂದೆ ಮಾತಿನಿಂದ ಹೇಳುತ್ತಾರೆ. ಅವರ ಸಂತಾಪ ಮಹಾತ್ಮನಾದ ಉದ್ಧವನಿಗೆ ಅರ್ಥವಾಗದೆ? ಅಂತಲೇ ಈ ಭಾಗಕ್ಕೆ "ಭ್ರಮರಗೀತೆ" ಎಂಬ ಹೆಸರು.

ಪ್ರಪಂಚದಲ್ಲಿ ಮಾನವನು ಉತ್ತಮಸ್ಥಿತಿಗತಿಯನ್ನು ಕಾಣಬೇಕಾದರೆ ಭಾಗವತನಾಗಬೇಕು ಎಂಬುದು ಬುಧಜನರ ಅಭಿಪ್ರಾಯ. ಅಂದರೆ ಭಗವಂತನಲ್ಲಿ ಸದಾ ಭಕ್ತಿಯುಳ್ಳವನಾಗಬೇಕು. ಇಂತಹ ಭಕ್ತಿ ಎಲ್ಲರಿಗೂ ದುರ್ಲಭ. ಇಂತಹ ಭಕ್ತಿ ಬರಬೇಕಾದರೆ ಭಗವಂತನು ನಮ್ಮ ಮೇಲೆ ಕೃಪೆ ಮಾಡಬೇಕಾದರ ಹಲವು ವಿಧವಿದೆ. ನವವಿಧ ಭಕ್ತಿ ಒಂದಾದರೆ, ಮೇಲೆ ತಿಳಿಸಿರುವ ಭ್ರಮರಗೀತೆ, ಗೋಪೀಗೀತೆ, ವೇಣುಗೀತೆ, ಪಾಂಡವಗೀತೆಯಂತಹ ಉತ್ತಮಗೀತೆಗಳ ಶ್ರವಣದಿಂದ ಭಗವಂತನಲ್ಲಿ ಭಕ್ತಿಯನ್ನು ಮಾಡಬಹುದಾಗಿದೆ.

ಗೋಕುಲದ ಗೋಪಿಕಾ ಸ್ತ್ರೀಯರು ಯಾವರೀತಿಯಲ್ಲಿ ತಮ್ಮ ಕೃಷ್ಣನನ್ನು ನಿಂದಾಸ್ತುತಿ ಮಾಡಿ ಶ್ರೀಕೃಷ್ಣನ ಕೃಪೆಗೆ ಪಾತ್ರರಾದರು, ಹಾಗೂ ಉದ್ಧವನ ಅಭಿಪ್ರಾಯ, ಅನುಗ್ರಹ -- ಇವನ್ನು ಹೇಗೆ ಪಡೆದರೆಂಬುದು ಮೂಲ ಭಾಗವತದ ಕೆಲವು ಶ್ಲೋಕಗಳ ವಿವರಣೆಯಿಂದ ವಿಧಿತವಾಗಿದೆ.

ಮಧುಪ ಕಿತವ ಬಂಧೋ
ಮಾಸ್ಪೃಶಾಸ್ಮಾನ್ ಸಪತ್ನ್ಯಾಃ
ಕುಚವಿಲುಲಿತಮಾಲಾ
ಕುಂಕುಮಶ್ಮಶ್ರುಭಿಸ್ನಮ್
ವಹತು ಮಧುಪತಿಃ ತತ್
ಮಾನಿನೀನಾಂ ಪ್ರಸಾದಂ
ಯದುಸದಸಿ ವಿಡಂಬ್ಯಂ
ಯಸ್ಯದೂತಸ್ತ್ವಮೀದೃಕ್

ಇಲ್ಲಿ ಗೋಪಿಯರು ದುಂಬಿಯ ಉದ್ದಿಶ್ಯದಲ್ಲಿ ಅಭಿಪ್ರಾಯ ವ್ಯಕ್ತಪಡಿಸುತ್ತಿರುವರು. ಆದರೆ ಅದರ ನೈಜ ಉದ್ದಿಶ್ಯವೇ ಬೇರೆ. ಅದು ಶ್ರೀಕೃಷ್ಣನ ಕೃಪಾದರ್ಶನ. ಮೇಲ್ನೋಟದ ಅರ್ಥವೆಂದರೆ ಉನ್ಮತ್ತ ಹೂಗಳಲ್ಲಿ ಅಲೆದಾಡುತ್ತ ಹೆಣ್ಣು ದುಂಬಿಯ ಆಲಿಂಗನೆಯಿಂದ ಕಾಮೋದ್ರೇಕಗೊಂಡ ದುಂಬಿಯೆ! ನೀನು ಹೂವಿನ ರಸದಿಂದ ಲಿಪ್ತವಾದ ಮುಖರೋಮವುಳ್ಳವನಾದ್ದರಿಂದ ನಮ್ಮನ್ನು ಮುಟ್ಟಬೇಡ. ನೀನು ವಸಂತನ ದೂತನಾಗಿರುವೆ. ನಿನ್ನ ಪ್ರಭುವಾದ ವಸಂತನು ಹೂವುಗಳ ಸಮೂಹದಲ್ಲಿ ಪ್ರಣಯ ಕೋಪವುಳ್ಳ ಹೆಣ್ಣುದುಂಬಿಗಳನ್ನು ಸಮಾಧಾನಗೊಳಿಸಲಿ ಎಂಬುದು.

ಇದರ ಅಂತರಾರ್ಥವೇ ಬೇರೆ. ಕಪಟ ನಾಟಕ ಸೂತ್ರಧಾರನಾದ ಶ್ರೀಕೃಷ್ಣನ ಬಂಧುವೇ, ನಮ್ಮ ಸವತಿಯರ ಅಧರವನ್ನು ಚುಂಬಿಸಿ ಅವರ ಆಲಿಂಗನೆಯನ್ನು ಮಾಡಿದ್ದರಿಂದ ಕಂಠದಲ್ಲಿರುವ ಮಾಲೆಗಳು ಕುಂಕುಮದಿಂದ ಲಿಪ್ತವಾದ ಮೀಸೆಗಡ್ಡಗಳುಳ್ಳವನು ಆದವನೆ ! ನೀನು ನಮ್ಮನ್ನು ಮುಟ್ಟಬೇಡ. **ಆ ಕೃಷ್ಣನು ಮಧುರೆಯಲ್ಲಿರುವ ಪ್ರಣಯ ಕೋಪಗೊಂಡ ಪ್ರೇಯಸಿಯರ ಮುಂದೆ ವಂದಿಸಿ ಸಮಾಧಾನಗೊಳಿಸಲಿ ಎಂಬುದು ತಾತ್ಪರ್ಯ.**

**ನಮ್ಮನ್ನು (ಗೋಪಿಕಾಸ್ತ್ರೀಯರನ್ನು) ಮರೆತು ಶ್ರೀಕೃಷ್ಣನು ಮಧುರೆಯಲ್ಲಿದ್ದಾನೆ. ಅಧರಾಮೃತ**

**ಭಾಗವತದ ಗೋಪೀಗೀತೆ, ಭ್ರಮರಗೀತೆ, ಪಾಂಡವಗೀತೆ, ವೇಣುಗೀತೆಗಳು ಭಕ್ತಿ ಸಾಹಿತ್ಯದ ಅತ್ಯುನ್ನತ ಶ್ರೇಣಿಯ ಉದಾಹರಣೆಗಳು. ಭ್ರಮರಗೀತೆಯಲ್ಲಿ ಮಧುರೆಯ ಗೋಪಿಕಾಸ್ತ್ರೀಯರ ಭಕ್ತಿಭಾವ ಮಡುಗಟ್ಟಿನಿಂತಿದೆ. ಚೇತೋಹಾರಿಯಾಗಿರುವ ಈ ಗೀತೆಯ ಪರಿಚಯ ಇಲ್ಲಿದೆ.**

## ಸಪ್ತಗಿರಿ ಬರಹಗಾರರಿಗೆ ಸೂಚನೆ :

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ರ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ ೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ.

ವನ್ನು ತಮಗೆ ಕುಡಿಸಿ ತಮ್ಮನ್ನು ಹೇಗೆ ಮರೆಯುವನು? ಇಂತಹ ಶ್ರೀಕೃಷ್ಣನನ್ನು ಶ್ರೀಲಕ್ಷ್ಮಿಯು ಅವನ ಸವಿನುಡಿಗಳಿಂದ ಮನಸೋತು ಅವನ ಅಡಿದಾವರೆಗಳನ್ನು ಸೇವಿಸುತ್ತಿರುವಳು. ಇಲ್ಲಿ ಶ್ರೀಕೃಷ್ಣ ಮತ್ತು ರುಕ್ಮಿಣಿಯರನ್ನು ಸ್ಮರಿಸುತ್ತಿದ್ದಾರೆ.

ಎಲೈ ಆರುಶಾಸ್ತ್ರಗಳಲ್ಲಿ ವಿದ್ವಾಂಸನಾದ ಉದ್ಧವನೆ! ನಮ್ಮ ಮುಂದೆ ಶ್ರೀಕೃಷ್ಣನನ್ನು ಹೀಗೆ ಹೊಗಳುವುದರ ಬದಲಾಗಿ ಆ ಪಾರ್ಥಸಾರಥಿಯ ಪ್ರೇಯಸಿಯರ ಮುಂದೆ ಆ ಕೃಷ್ಣನನ್ನು ಹೊಗಳು, ಆದ್ದರಿಂದ ವಿಯೋಗ ದುಃಖವನ್ನು ನೀಗಿಕೊಂಡು ಮಧುರೆಯ ಮಹಿಳೆಯರು ನಿನ್ನ ಸ್ತೋತ್ರಕ್ಕೆ ಮೆಚ್ಚಿ ನಿನಗೆ ಬಹುಮಾನ ಉಡುಗೊರೆ ಕೊಡುವರೆಂಬುದಾಗಿ ಛೇಡಿಸುವರು.

ದಿವಿಭುವಿಚರ ಸಾಯಾಂ
ಕಾಸ್ತ್ರಿಯಸ್ತದ್ದುರಾಪಾಃ
ಕಪಟರುಚಿರ ಹಾಸ
ಭ್ರೂವಿಜೃಂಭಸ್ಯ ಯಾಃ ಸ್ಯುಃ
ಚರಣ ರಜ ಉಪಾಸ್ತೆ ಯಸ್ಯ
ಭೂತಿರ್ವ ಯಂ ಕಾ
ಅಪಿ ಚ ಕೃಪಣ ಪಕ್ಷೇ
ಉತ್ತಮ ಶ್ಲೋಕ ಶಬ್ದಃ

ಶ್ರೀಕೃಷ್ಣನ ಸುಂದರವಾದ ನಗು, ಹುಬ್ಬಿನ ಚಲನೆ, ಇವುಗಳಿಗೆ ಸ್ವರ್ಗಭೂಮಿ ಪಾತಾಳದ ಸ್ತ್ರೀಯರೆಲ್ಲರೂ ವಶರಾಗುತ್ತಾರೆ. ಸಂಶಯವಿಲ್ಲ. ಐಶ್ವರ್ಯಾಭಿಮಾನಿನಿಯಾದ ಲಕ್ಷ್ಮೀದೇವಿಯೂ ಅವನ ಅನುಗ್ರಹವನ್ನು ಪಡೆಯಲು ಪಾದಧೂಳಿಯನ್ನೂ ಸೇವಿಸುತ್ತಾಳೆ. ಇಂತಹದರಲ್ಲಿ ನಾವು ಎಷ್ಟರವರೆಂದು ಖಿನ್ನ ಮನಸ್ಕರಾಗುತ್ತಾರೆ.

ಯದನು ಚರಿತಲೀಲಾ
ಕರ್ಣಪೀಯೂಷವಿಪ್ರುಟ್
ಸಕೃದದನ ವಿಧೂತ
ದ್ವಂದ್ವ ಧರ್ಮಾವಿನಷ್ಟಾಃ
ಸವದಿಗೃಹ ಕುಟುಂಬಂ
ದೀನ ಮುತ್ಸೃಜ್ಯ ದೀನಾ
ಬಹವ ಇಹ ವಿಹಂಗಾ
ಭೈಕ್ಷ್ಯ ಚರ್ಯಾಂ ಚರಂತಿ

ಇದು ಬಲು ಸ್ವಾರಸ್ಯವಾದ ಸ್ತುತಿ. ಇದು ಚಮತ್ಕಾರಯುತ ದ್ವಂದ್ವಾರ್ಥ ಹೊಂದಿದೆ. ಶ್ರೀಕೃಷ್ಣನ ಅವತಾರ ಲೀಲೆ ಒಂದು ಸಾರಿ ಕೇಳಿದರೆ ಸಾಕು. ದಾರಿದ್ರ್ಯವನ್ನುಂಟು ಮಾಡುವ ಮನೆ ಮತ್ತು ಸಂಸಾರ ತ್ಯಜಿಸಿ ಸನ್ಯಾಸಿಗಳಾಗಿ ಜ್ಞಾನ ಸಂಪಾದಿಸಲು ಭಿಕ್ಷಾಟನೆ ಮಾಡುತ್ತಾನೆ ಎಂದರೆ ಇನ್ನೊಂದು ಅರ್ಥ ಸಿಂದೆಯಿಂದ ಕೂಡಿದ್ದು ಶ್ರೀಕೃಷ್ಣನ ಕಥೆ ಕೇಳಿ ಜನರು ಮೋಹಗೊಂಡು ಮನೆಸಂಸಾರ ಬಿಟ್ಟು, ದುಃಖಿಗಳಾಗಿ ಭಿಕ್ಷೆ ಬೇಡುವರೆಂದು ನಿಂದಾಸ್ತುತಿ ಆಗುತ್ತದೆ. ಅಂದರೆ ಗೋಪಿಯರ ಉದ್ದಿಶ್ಯ ಜ್ಞಾನಿಗಳಾಗಿಬಿಡುತ್ತಾರೆಂದು.

ನಂತರ ಗೋಪಿಯರು ಹೇಳುತ್ತಾರೆ, ಎಲೈ ಮಹಾತ್ಮನಾದ ಉದ್ಧವನೆ, ನೀನು ನಮಗೆ ಪೂಜ್ಯನು. ಶ್ರೀಕೃಷ್ಣನು ನಮ್ಮಿಂದ ಏನನ್ನು ಬಯಸುವನು ತಿಳಿಸು ಎನ್ನುತ್ತಾರೆ. ಇಲ್ಲಿರುವ ನಮ್ಮನ್ನು ಹೇಗೆ ಕೃಷ್ಣನ ಬಳಿಗೆ ಒಯ್ಯುವೆ ಎಂದು ಪ್ರಾರ್ಥಿಸುತ್ತಾರೆ. ಇದು ಅವರ ಭಕ್ತಿ ಭಾವದ ಪರಾಕಾಷ್ಠೆ ಎನ್ನಿಸುತ್ತದೆ.

ಅವರ ಪ್ರಾರ್ಥನೆ ಹೇಗಿತ್ತೆಂದರೆ--

ಭುಜಮಗುರು ಸುಗಂಧಂ
ಮೂರ್ಧ್ನ್ಯಧಾಸ್ಯತ್ಕದಾನು

ಸ್ವಲ್ಪಕಾಲವಾದರೂ ದಾನಿಯರಾದ ನಮಗೆ ಅಧೀನನಾಗಿ ತನ್ನ ಸುವಾಸನೆಯಾದ ತನ್ನ (ಶ್ರೀಕೃಷ್ಣನ) ತೋಳನ್ನು ನಮ್ಮ ತಲೆಯ ಮೇಲಿರಿಸಿ ಯಾವಾಗ ಅನುಗ್ರಹ ಮಾಡುತ್ತಾನೆಂದು ಪ್ರಾರ್ಥಿಸುವರು.

ಉದ್ಧವನು ಗೋಪಿಕೆಯರು ಶ್ರೀಕೃಷ್ಣನ ಮೇಲಿಟ್ಟಿರುವ ಅವರ ಭಕ್ತಿಗೆ ಸಂತುಷ್ಟನಾಗುತ್ತಾನೆ. ಅವರಿಗೆ ಅಭಯ ನೀಡುತ್ತಾನೆ. ಸಾಂತ್ವನಗೊಳಿಸುತ್ತಾನೆ. ಶ್ರೀಕೃಷ್ಣನ ಸಮಾಗಮ ತಿಳಿಸುತ್ತಾನೆ.

ಅಹೋ ಯೂಯಂ ಸ್ಮಪೂರ್ಣಾರ್ಥಾ
ಭವಂತ್ಯೋ ಲೋಕಪೂಜಿತಾಃ
ವಾಸುದೇವೇ ಭಗವತಿ
ಯಾ ಸಾಮಿತ್ಯರ್ಪಿತಾಮತಿಃ

ಎಲೈ ಗೋಪಿಯರೆ, ನಿಮ್ಮ ಮನಸ್ಸು ಶ್ರೀಕೃಷ್ಣನಲ್ಲಿ ನೆಟ್ಟಿರುವುದರಿಂದ ನೀವು ಲೋಕ ಮಾನ್ಯರೂ, ಧನ್ಯರೂ ಆಗಿದ್ದೀರಿ ಎಂದು ಹೊಗಳುತ್ತಾನೆ. ಹಾಗೂ ವಿವರಿಸುತ್ತಾನೆ ಈ ಸ್ತೋತ್ರದಿಂದ--

ಸರ್ವಾತ್ಮಭಾವೋಧಿಗತೋ
ಭವತೀ ನಾಮಧೋಕ್ಷಜೇ
ವಿರಹೇಣ ಮಹಾಭಾಗಾ
ಮಹಾನ್ಮೋನುಗ್ರಹಃ ಕೃತಃ

ಎಂದರೆ ಪುಣ್ಯವತಿಯರಾದ ಗೋಪಿಕಾಸ್ತ್ರೀಯರೇ ನಿಮಗೆ ಕೃಷ್ಣನ ಅಗಲಿಕೆಯು ಅವನ ಸಹಭಾವವನ್ನು ತಂದುಕೊಟ್ಟು ಅನುಗ್ರಹವನ್ನುಂಟುಮಾಡಿದೆ. ಹಾಗೂ ಅವನ ಶಾಶ್ವತ ಅನುಗ್ರಹಕ್ಕೆ ನೀವು ಪಾತ್ರರಾಗಿರುವಿರಿ ಎಂದು ಗೋಪಿಕೆಯರನ್ನು ಸಂತೋಷಗೊಳಿಸುತ್ತಾನೆ ಉದ್ಧವ.

(ಸಂಗ್ರಹ)

# ಶ್ರೀ ರಾಘವೇಂದ್ರ ಗುರುಸ್ವಾರ್ವಭೌಮರು

---ಎಮ್. ಜಿ. ರಾಮಾಚಾರ್.



ರಾಘವೇಂದ್ರರು ಎಲ್ಲರ ಅಪೇಕ್ಷೆಗಳನ್ನು ಈಡೇರಿಸುತ್ತಿದ್ದಾರೆ ಎಂಬುದನ್ನು ಲೋಕದಲ್ಲಿ ನಾವು ಕಾಣುತ್ತಿದ್ದೇವೆ ಹಾಗು ಕೇಳುತ್ತಿದ್ದೇವೆ. ಆದ್ದರಿಂದಲೆ ಅಪ್ಪಣ್ಣಾಚಾರ್ಯರು ತಮ್ಮ ರಾಘವೇಂದ್ರ ಸ್ತೋತ್ರದಲ್ಲಿ ಹೀಗೆ ಹೇಳಿರುತ್ತಾರೆ :--

ಅಪೇಕ್ಷಿತ ಪ್ರದಾತಾಽನ್ಯೋ
ರಾಘವೇಂದ್ರಾ ನ್ನವಿದ್ಯತೇ

ಅಂದರೆ ಭಕ್ತರ ಅಭೀಷ್ಟವನ್ನು ಒದಗಿಸುವುದರಲ್ಲಿ ಗುರುರಾಜರ ವಿನಹ ಇನ್ನೊಬ್ಬರು ಯಾರೂ ಇಲ್ಲ. ಇದರಿಂದ ನಮಗೆಲ್ಲ ಒಂದು ಶಂಕೆ ಬರಬಹುದು. ಅದು ಏನೆಂದರೆ ರಾಯರಿಗೆ ಈ ಒಂದು ಸಾಮರ್ಥ್ಯ ಅಥವಾ ಶಕ್ತಿ ಹೇಗೆ ಬಂದಿತು? ಅದಕ್ಕೆ ಅಪ್ಪಣಾಚಾರ್ಯರು ಮೇಲೆ ಹೇಳಿದ ವಾಕ್ಯದ ಹಿಂದುಗಡೆಯಲ್ಲಿ ನಮಗೆ ಉತ್ತರರೂಪವಾಗಿ ಈ ರೀತಿ ತೋರಿಸುತ್ತಾರೆ :--

ಅಪರೋಕ್ಷೀಕೃತಶ್ರೀಶಃ
ಸಮುಪೇಕ್ಷಿತ ಭಾವಜಃ

ಸಮುಪೇಕ್ಷಿತಭಾವಜಃ - ಅರ್ಥಾತ್ ಉಳಿದೆಲ್ಲ ದುರಾಶೆಗಳನ್ನು ಪರಿತ್ಯಜಿಸಿದವರು ಅಂದರೆ ಜೀತೇಂದ್ರಿಯರು. ಅಪರೋಕ್ಷಿಕೃತಶ್ರೀಶಃ ಅಂದರೆ ಶ್ರೀಹರಿಯನ್ನು ಸಾಕ್ಷಾತ್ಕರಿಸಿಕೊಂಡಿರುವವರು. ತಮ್ಮ ಮೊದಲನೆಯ ಅವತಾರದಲ್ಲಿಯೂ ಶ್ರೀಲಕ್ಷ್ಮೀಪತಿಯಾದ ನೃಸಿಂಹದೇವವರೇಣ್ಯನನ್ನು ಪ್ರತ್ಯಕ್ಷ ಸಂದರ್ಶನಗೊಂಡವರು. ಆ ವೇಳೆಯಲ್ಲಿ ಪ್ರಹ್ಲಾದ ರಾಜರೆಂದು ಖ್ಯಾತಿಯನ್ನು ಪಡೆದಿದ್ದಾರೆ. ಶ್ರೀಹರಿಯನ್ನು ಸಾಕ್ಷಾತ್ಕಾರಮಾಡಿಕೊಂಡಿರುವುದರಿಂದ ನಮ್ಮ ಎಲ್ಲ ಅಪೇಕ್ಷೆಯನ್ನು ಈಡೇರಿಸುತ್ತಿದ್ದಾರೆ.

ಭಗವಂತನ ಸಾಕ್ಷಾತ್ಕಾರವಾಗದೇಕಾದರೆ ಶ್ರೀ ವಾಯುದೇವರ ಅನುಗ್ರಹ ಬಹಳ ಅವಶ್ಯಕ. ಅವರ ಅನುಗ್ರಹವಿಲ್ಲದೆ ಭಗವಂತನ ಅನುಗ್ರಹವಾಗಲು ಸಾಧ್ಯವಿಲ್ಲ. ಆದ್ದರಿಂದ ವಾಯುದೇವರ ಸೇವೆಯನ್ನು ಅತ್ಯವಶ್ಯಕವಾಗಿ ಮಾಡಬೇಕು. ಹಾಗಾದರೆ ವಾಯುದೇವರ ಸೇವೆಯನ್ನು ಗುರುರಾಜರು ಮಾಡಿದ್ದಾರೆಯೇ? ಎಂದು ನಮ್ಮಲ್ಲಿ ಪ್ರಶ್ನೆ ಉದ್ಭವಿಸಿದರೆ, ಇದಕ್ಕೆ ಉತ್ತರ ಅವರ ಎರಡನೆಯ ಅವತಾರವಾದ ವ್ಯಾಸರಾಯರಿಂದ ಸಿಗುತ್ತದೆ. ಬ್ರಹ್ಮಚರ್ಯ ಆಶ್ರಮದಿಂದ ಗೃಹಸ್ಥಾಶ್ರಮವನ್ನು ಸ್ವೀಕರಿಸದೆ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಮುಖ್ಯಪ್ರಾಣದೇವರ ಸೇವೆಯನ್ನು ಅತಿಯಾಗಿ ಮಾಡಿದ್ದಾರೆ ಎಂದು. ಪ್ರಾಣದೇವರ ಪ್ರತಿಮೆಯನ್ನೇ ಪ್ರತಿಷ್ಠಾಪನ ಮಾಡುವುದು ಬಹಳ ಕಷ್ಟವೆಂದು ನಮಗೆಲ್ಲ ಅನಿಸುತ್ತದೆ. ಅಂತಹದು, ವ್ಯಾಸರಾಯರು ಬೇರೆ ಬೇರೆ ಕ್ಷೇತ್ರಗಳಲ್ಲಿ ಸುಮಾರು ೭೩೨ ಪ್ರಾಣದೇವರ ಪ್ರತಿಮೆಗಳನ್ನು ಪ್ರತಿಷ್ಠಾಪನೆ ಮಾಡಿದ್ದಾರೆ. ಒಂದು ಸಲ ಮಾಡಿದ ಕಾರ್ಯವನ್ನು ಇನ್ನೊಂದು ಸಲ ಮಾಡಲು ಹೊರಟಾಗ ನಮಗೆಲ್ಲ ಬೇಸರವೆನಿಸುತ್ತದೆ. ಆದರೆ ವ್ಯಾಸರಾಯರು ಮಾಡಿರುವ ಪ್ರಾಣದೇವರ ಪ್ರತಿಮೆಗಳ ಪ್ರತಿಷ್ಠಾಪನವನ್ನು ನೋಡಿದಾಗ ಅವರಲ್ಲಿ ಪುನಃ ಪುನಃ ವಾಯುದೇವರ ಸೇವೆಯನ್ನು ಮಾಡಲು ಸ್ವಲ್ಪವೂ ಕೂಡಾ ಬೇಸರಿಕೆಯಿಲ್ಲವೆಂದು ಅನಿಸುತ್ತದೆ. ಅಷ್ಟೇ ಅಲ್ಲ ಆ ವಾಯುದೇವರ ಕುರಿತು :-- ಸೇವೆಯ ಮಾಡುವ ಲವಲ

ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಶಾಪಾನುಗ್ರಹಶಕ್ತಿ ಅಸದೃಶ. ಅದರ ಕಾರಣವನ್ನು ಸೂಕ್ತವಾದ ಚರ್ಚೆಯೊಡನೆ ಇಲ್ಲಿ ವಿವರಿಸಲಾಗಿದೆ. ಗುರುರಾಯರ ಆರಾಧನೆಯ ಈ ತಿಂಗಳಿನಲ್ಲಿ ಅವರ ನೆನಪಿನ ಈ ಲೇಖನವೂ ಆರಾಧನೆಯ ಒಂದು ಅಂಶವೇ.

ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ
--ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ
--ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ
--ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ
--ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ
--ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

ತಿ. ತಿ. ದೇವಸ್ಥಾನಗಳು,
ತಿರುಪತಿ.

ಏಕೆ, ತಪಸ್ಸು ಹಾಗೂ ಎಷ್ಟೊಂದು ಶ್ರದ್ಧಾ, ಭಕ್ತಿ ಇತ್ಯಾದಿ ಇವೆ ಎಂದು ತಿಳಿಯುತ್ತದೆ. ವಾಯುದೇವರ ಸೇವೆಯನ್ನು ತಮ್ಮ ಅಷ್ಟಾಂಗಗಳಿಂದ ಸಲ್ಲಿಸಿದ್ದಾರೆ ಆ ಒಂದು ಸೇವೆಯ ಫಲದಿಂದಾಗಿ ಮಂತ್ರಾಲಯ ಪ್ರಭುಗಳಿಗೆ ಭಗವಂತನ ಅಪರೋಕ್ಷವಾಗಿದೆ. ಆನಂದನಾಮಕ ವಾಯುದೇವರೇ ಬ್ರಹ್ಮದೇವರಾಗುತ್ತಾರೆ. ಅಂತಹ ಶತಾನಂದನಾಮಕ ಬ್ರಹ್ಮದೇವರ ಸೇವೆಯನ್ನು ಸತ್ಯಲೋಕದಲ್ಲಿರುವ ಶಂಕುಕರ್ಣ ಕರ್ಮಜಾದೇವತೆ ಮಾಡಿರುವರು. ಆ ಒಂದು ಸೇವೆಯ ಫಲದಿಂದ ಪ್ರಹ್ಲಾದರಾಜರಾದಾಗ ಶ್ರೀ ನೃಸಿಂಹದೇವರನ್ನು ಅಪರೋಕ್ಷೀಕರಿಸಿಕೊಂಡಿರುತ್ತಾರೆಂಬುದನ್ನು ಕೂಡಾ ಇಲ್ಲಿ ಗಮನಿಸಬೇಕು.

ಹರಿವಾಯುಗಳ ಅನುಗ್ರಹದಿಂದ ಇವತ್ತು ಈ ಲೋಕದಲ್ಲಿ ಗುರುಸಾರ್ವಭೌಮರಾಗಿ ಮೆರೆಯುತ್ತಿದ್ದಾರೆ. ಆದ್ದರಿಂದ ಅಪ್ಪಣಾಚಾರ್ಯರು :--

ಅಗಮ್ಯಮಹಿಮಾ ಲೋಕೇ
ರಾಘವೇಂದ್ರೋ ಮಹಾಯಶಾಃ

ಎಂದು ಕೊಂಡಾಡಿದ್ದಾರೆ. ಮಹಾ ಮಹಿಮೆ ಹಾಗೂ ಅಗಾಧವಾದ ಕೀರ್ತಿಗೆ ಹರಿವಾಯಗಳ ಅನುಗ್ರಹ ಎಷ್ಟೊಂದು ಮುಖ್ಯವೆಂದು ತಿಳಿಯುತ್ತದೆ. ಅಷ್ಟೆ ಅಲ್ಲ ಶ್ರೀಹರಿವಾಯುಗಳ ಅನುಗ್ರಹದಿಂದ ಗುರುರಾಜರು ತಮ್ಮ ಸರ್ವ ಗ್ರಂಥಗಳನ್ನು ಅನ್ಯಾಪೇಕ್ಷೆಯಿಲ್ಲದೆ ರಚಿಸಿದರು ಹಾಗೂ ಮಧ್ವ ಸಿದ್ಧಾಂತವನ್ನು ಬೆಳೆಸಿದರು ಮತ್ತು ಮೆರೆಸಿದರು.

ಅದಕ್ಕೆ ಅಪ್ಪಣಾಚಾರ್ಯರು :--

ಸರ್ವತಂತ್ರಃ ಸ್ವತಂತ್ರೋಽಸೌ
ಶ್ರೀ ಮಧ್ವಮತವರ್ಧನಃ

--ಎಂದು ಪ್ರತಿಪಾದಿಸಿರುತ್ತಾರೆ.

ಅಪರೋಕ್ಷಜ್ಞಾನಿಗಳು, ಅಗಮ್ಯಮಹಿಮರಾದ ಶ್ರೀ ರಾಘವೇಂದ್ರರನ್ನು ಯೋಗೀಂದ್ರತೀರ್ಥರು ಅತ್ಯಂತ ಅತ್ಯಂತ ದಯೆಯುಳ್ಳವರೆಂದು ಪ್ರಶಂಸೆ ಮಾಡಿರುತ್ತಾರೆ.

ದುರ್ವಾದಿ ಧ್ವಾಂ ತರವಯೇ
ವೈಷ್ಣವೇಂದೀವರೇಂದವೇ
ಶ್ರೀ ರಾಘವೇಂದ್ರ ಗುರುವೇ
ನಮೋಽತ್ಯಂತ ದಯಾಲವೇ

ಇದನ್ನು ಆಧಾರವಾಗಿಟ್ಟುಕೊಂಡು ಅಪ್ಪಣಾಚಾರ್ಯರು--

ಶಾಪಾನುಗ್ರಹಶಕ್ತೋಽನ್ಯೋ
ರಾಘವೇಂದ್ರಾನ್ನವಿದ್ಯತೇ

--ಎಂದು ಅನುಮೋದಿಸಿರುತ್ತಾರೆ.

ಶಾಪಕೊಡುವವರಿಗೆ ಅನುಗ್ರಹಮಾಡುವವ ಸಾಮರ್ಥ್ಯವಿರುತ್ತದೆ ಮತ್ತು ಅನುಗ್ರಹಮಾಡುವವರಿಗೆ ಶಾಪ ಹಾಕುವ ಸಾಮರ್ಥ್ಯವಿರುತ್ತದೆ. ಹಾಗಾದರೆ ಅಪ್ಪಣಾಚಾರ್ಯರು ಶಾಪ ಮತ್ತು ಅನುಗ್ರಹ ಎಂದು ಎರಡು ಶಬ್ದವನ್ನು ಏಕೆ ಬಳಸಿದರು? ಎಂದು ನಮಗೆಲ್ಲ ಅನುಮಾನ ಬಂದರೆ, ಶ್ರೀ ಯೋಗೀಂದ್ರತೀರ್ಥರು ಹೇಳಿದ ಅತ್ಯಂತ ಅತ್ಯಂತ ದಯೆಯನ್ನು ಇಲ್ಲಿ ಪ್ರಕಟ ಮಾಡಲು ಪ್ರಯೋಗಿಸಿರುತ್ತಾರೆ ಎಂದು ತಿಳಿದುಕೊಳ್ಳಬೇಕು. ಅದು ಹೇಗೆಂದರೆ--

ಶಾಪಯೋಗ್ಯೇಽಪಿ ಅನುಗ್ರಹಕರಣಶಕ್ತಃ
ರಾಘವೇಂದ್ರಾದನ್ಯಃ ನವಿದ್ಯತೇ

ತಪ್ಪುಮಾಡಿದ್ದಾನೆ ಶಾಪ ಹಾಕಬೇಕು. ಆದರೆ ರಾಯರು ಪುನಃ ಅನುಗ್ರಹವನ್ನೇ ಮಾಡಿ ಕಳುಹಿಸುತ್ತಿದ್ದಾರೆ. ಇದು

ಶಾಪಾನುಗ್ರಹಶಕ್ತೋಽನ್ಯೋ
ರಾಘವೇಂದ್ರಾನ್ನ ವಿದ್ಯತೇ

--ಯ ಅಂತರಾರ್ಥ.

ಪ್ರಹ್ಲಾದರ ಚರಿತ್ರೆಯಿಂದ ಈ ವಿಷಯ ನಮಗೆ ಸ್ಪಷ್ಟವಾಗುತ್ತದೆ. ಲೋಕಕಂಟಕ ಹಾಗೂ ಶ್ರೀಹರಿದ್ವೇಷಿಯಾದ ಹಿರಣ್ಯಕಶಿಪು ತನ್ನ ಮಗನಾದ ಹರಿಭಕ್ತ ಪ್ರಹ್ಲಾದನನ್ನೇ ಕೊಲ್ಲಲಿಕ್ಕೆ ಉದ್ಯುಕ್ತನಾದ ಎಂಬುದನ್ನು ಕೇಳುತ್ತೇವೆ. ಇಂತಹ ತಂದೆಯನ್ನು ಶ್ರೀ ನರಸಿಂಹದೇವರು ಸಂಹಾರ ಮಾಡಿದ ಮೇಲೆ ಪ್ರಹ್ಲಾದನನ್ನು ಕುರಿತು :--

ನನ್ನಿಂದ ಏನು ವರಬೇಕು ಆ ವರವನ್ನು ಕೇಳಿಕೊ ಎಂದು ಅಂದಾಗ--

ಪ್ರಹ್ಲಾದ :-- 'ಪಿತಾಮೇ ಪೂಮೇತ್' ಅಂದರೆ ನನ್ನ ತಂದೆಯನ್ನು ಉದ್ಧಾರಮಾಡು ಎಂದು ಕೇಳಿಕೊಂಡಿದ್ದಾರೆ. ಇದರಿಂದ ನಮಗೆ ರಾಯರು ಅತ್ಯಂತ ಅತ್ಯಂತ ದಯೆಯುಳ್ಳವರೆಂದು ಸ್ಪಷ್ಟವಾಗುತ್ತದೆ.

ಇಂತದ ಶ್ರೀ ರಾಘವೇಂದ್ರರ ಸೇವೆಯನ್ನು ಮಾಡಿ ಅವರ ದ್ವಾರಾ ವಾಯುದೇವರ ಅನುಗ್ರಹಕ್ಕೆ ಪಾತ್ರರಾಗಿ ಅವರ ದ್ವಾರಾ ಭಗವಂತನ ಅನುಗ್ರಹಕ್ಕೆ ಪಾತ್ರರಾಗೋಣ.

ಶ್ರೀ ಮಧ್ವೇಶಾರ್ಪಣಮಸ್ತು.





# KARVETINAGAR
# SRI VENUGOPALASWAMI TEMPLE

### A SYMBOL OF VIBRANT FAITH

*Faith is the source of light*
*Faith is the all-pervading wisdom*
*So declare the sages and saints*

It is the abiding faith of the devout that made the Temple of Sri Venugopalaswami an edifice of everlasting glory.

The Deity - Sri Venugopalaswami - was the patron God of the Karvetinagar rulers whose immeasurable love for the Lord finds its eloquent expression in the hymns composed in a bygone epoch.

Towering above the dusky hills and the green valley below, the temple presents a spectacular view.

The exquisitely carved sculptures, intricately designed pillars and elaborately decorated mandapas are indeed a connoisseur's delight.

The graceful forms of Lord Venugoplaswami and His consorts - Sri Satyabhama and Sri Rukmini captivate our hearts. The Deity -known as bounteous *Kalpavriksha* - bestows His blessings on all those who pray to Him.

The celebrated poet Sarangapani who was the court-poet of the rajas of Karvetinagar, declares unequivocally that the easiest means for salvation in the Kaliyuga is the darsan of Sri Venugopalaswami. It is said Thyagaraja the renowned composer, attained bliss after worshipping Lord Venugopala.

The *darshan* of Sri Venugopalaswami is an exhilarating spiritual experience. The Lord, one of the most delightful manifestations of Sriman Narayana, is a veritable Kalpavriksha.

Karvetinagar is located on Puttur - Chittoor road, about 25 Kilometres away from Tirupati. The Temple is being kept open for worship from early hours of the morning to late hours of the night.

* * *



# ಶ್ರೀಕೃಷ್ಣರಾಯಭಾರ

---ಸಂತಹರಿಹರಾನಂದ ಸರಸ್ವತೀ.

ಶ್ರೀಕೃಷ್ಣ ಸಂಧಿಯ ನೆವದಲವರ ಭಾವವನ್ನು ವಿರೋಧಕ್ಕೇ ಎಳೆಯುವಂತೆ ಯುದ್ಧವನ್ನು ನಿಶ್ಚಯಿಸಿಬರಲೆಂದೇ ರಾಯಭಾರಕ್ಕೆ ಹೊರಟ. ಅವನು ಆಡುವ ನರನಾಟಕದಲ್ಲಿ ಇದೊಂದು ಮುಖ್ಯ ಘಟ್ಟ. ಕುಮಾರವ್ಯಾಸನ ಲೇಖನಿ ಅದನ್ನು ಸ್ವಾರಸ್ಯವಾಗಿ ವಿವರಿಸಿದೆ. ಪರಿವ್ರಾಜಕಾಚಾರ್ಯ ಹರಿಹರಾನಂದಸರಸ್ವತಿಗಳು ಅದನ್ನು ಇಲ್ಲಿ ಸರಳವಾಗಿ ವಿವರಿಸಿದ್ದಾರೆ.



ಪರಮ ಧಾರ್ಮಿಕರಾದ ಪಂಚಪಾಂಡವರು ದುರುಳ ದುರ್ಯೋಧನನ ವಂಚನೆಯ ಸಂಚನ್ನರಿಯದೆ ಅವನೊಡ್ಡಿದ ಪಣಕ್ಕೆ ಒಪ್ಪಿ ದ್ಯೂತಮುಖವಾಗಿ ಎಲ್ಲವನ್ನೂ ಕಳೆದುಕೊಂಡು ಸೋತು ಅವನ ಕಟ್ಟಳೆಯಂತೆ--

ಹನ್ನೆರಡು ವರುಷಗಳ ವನವಾಸವನ್ನು, ಮೇಲೊಂದು ವರ್ಷದ ಅಜ್ಞಾತವಾಸವನ್ನು ಮತ್ಸ್ಯನಗರಿಯ ವಿರಾಟರಾಯನ ಅರಮನೆಯಲ್ಲಿ ತೊತ್ತಿನವರಾಗಿ ಸೇರಿ ಕಾಲಯಾಪನೆ ಮಾಡುತ್ತಾ, ವಿರಾಟನ ಪ್ರೀತಿಯನ್ನೂ, ಜೊತೆಗೆ ಅವನ ಬಂಧುತ್ವವನ್ನೂ ಗಳಿಸಿ, ಶ್ರೀಕೃಷ್ಣನ ಕೂರ್ಮೆಯಿಂದ ಹಸ್ತಿನಾಪುರಕ್ಕೆ ಮರಳಿ ಉಪಪ್ಲಾವ್ಯ ನಗರದಲ್ಲಿ ನೆಲೆನಿಂತರು, ಅಗ್ನಿಕನ್ಯೆದ್ರುಪದನಂದನೆ ದ್ರೌಪದಿಯ ಸಹಿತ.

ತರುವಾಯ ಮುಂದಿನ ತಮ್ಮ ನೆಲೆಯಕುರಿತು -- ಯುಧಿಷ್ಠಿರನು ತನ್ನ ತಮ್ಮಂದಿರೊಡನೆ ಚರ್ಚಿಸಿ, ಕಡೆಗೆ ಒಂದು ನಿರ್ಧಾರವನ್ನು ತೆಗೆದುಕೊಂಡು ತಮ್ಮ ಇಷ್ಟದೈವವಾದ ಪರಮಾತ್ಮ ಶ್ರೀಕೃಷ್ಣನನ್ನು ಕರೆಸಿಕೊಂಡು ಅವನಲ್ಲಿ ತಮ್ಮ ಅಭಿಪ್ರಾಯವನ್ನು ಇಡುತ್ತಾನೆ.

"ಹೇ ಕರುಣಾಳು ಕೃಷ್ಣಾ, ವಾಸುದೇವಾ, ನಿನ್ನ ಪರಮಾನುಗ್ರಹದಿಂದ ನಾವು ವನವಾಸವನ್ನು, ಅಜ್ಞಾತವಾಸವನ್ನು ಪೂರೈಸಿ ಬಂದೆವು. ಇನ್ನು ನಮ್ಮ ಮುಂದಿರುವುದು ನಮ್ಮ ಅಸ್ತಿತ್ವದ ಪ್ರಶ್ನೆ. ಆದುದರಿಂದ ಹಸ್ತಿನಪುರದಲ್ಲಿ ನೆಲೆಯೂರುವ ಬಗ್ಗೆ ನಾವು ಐವರೂ ಚಿಂತಿಸಿ - ಒಂದು ನಿರ್ಣಯಕ್ಕೆ ಬಂದಿದ್ದೇವೆ.

"ಈ ಭೂಮಿಯಲ್ಲಿ ನಾವೂ ಬದುಕಲು ಹಕ್ಕು ಇರುವುದರಿಂದ ನಮ್ಮ ನೈತಿಕ ಹಕ್ಕನ್ನು ಚಲಾಯಿಸಿ - ಅರ್ಧರಾಜ್ಯವನ್ನು ಕೊಡುವಂತೆ ಆ ದುರ್ಯೋಧನನನ್ನು ಕೇಳುವುದು - ಅವನು ಅದಕ್ಕೊಪ್ಪದೆ ಇದ್ದಲ್ಲಿ "ಇಂದ್ರಪ್ರಸ್ಥ" ಮೊದಲಾದ ಐದು ಗ್ರಾಮಗಳನ್ನಾದರೂ ಕೊಡುವಂತೆ ಕೇಳುವುದು.

"ಹೇ, ದೇವಾ, ಈ ವಿಷಯದಲ್ಲಿ ನಮಗೆ ನಿನ್ನ "ದೈವಬಲ ಮತ್ತು ನಿನ್ನ ಸಂಕಲ್ಪಶಕ್ತಿ" ಯ ನೆರವನ್ನು ನಾವು ನಿನ್ನಲ್ಲಿ ಬೇಡುತ್ತಿದ್ದೇವೆ. ಓ ಪರಮಾತ್ಮಾ ನೀನೀಗ ಹಸ್ತಿನಪುರಕ್ಕೆ ತೆರಳಿ, ದುರ್ಯೋಧನನನ್ನು ಕಂಡು -- ಸಮ್ಮಾರ್ವರ ಬೆಸುಗೆಗಾಗಿ ಪ್ರಯತ್ನಿಸು. ಇಲ್ಲವೇ, ಈ ಮೇಲಿನ ಅಭಿಪ್ರಾಯವನ್ನು ಅವನ ಮುಂದಿಡು. ನಿನ್ನ "ಅನುಗ್ರಹವೇ ನಮ್ಮ ಬದುಕಿಗೆ ಬೆಳಕು" ಎಂದು ಭಕ್ತಿಯ ಭಾರದಲ್ಲಿ ರಕ್ತನಾಗಿ ಬಾಗಿ ಬೇಡುತ್ತಾನೆ.

ನಂತರ ಶ್ರೀ ವಾಸುದೇವನು -- 'ಅಸ್ತು' ಎಂದು ಪಾಂಡವರನ್ನು (ಪತಿಕರಿಸಿ) ಹರಸಿ, ಅಲ್ಲಿಂದ ಹೊರಟು, ದ್ರೌಪದಿಯ ಬಳಿ ಬಂದು, ಅವಳ ಕ್ಷೇಮವನ್ನು ವಿಚಾರಿಸಿ ಪಾಂಡವರ ಅಭಿಪ್ರಾಯವನ್ನು ಅವಳ ಮುಂದಿಡುತ್ತಾನೆ. ವಿಷಯ ತಿಳಿದ ಪಾಂಚಾಲೆಯು ನಸುನಕ್ಕು -- ಪರಮಾತ್ಮಾ ಅವರಿಗೆಲ್ಲಿಯೋ ಭ್ರಮೆಯಷ್ಟೆ. ಆ ಧೂರ್ತನು ಭೂಮಿಯನ್ನು ಕೊಡುವನೆಂದು ಅವರಿನ್ನೂ 'ಕನಸು' ಕಾಣುತ್ತಿರುವಂತಿದೆ. ಅಷ್ಟು ಧಾರಾಳವಾದ ಮನಸ್ಸು ಆ ದುರುಳನಿಗೆ ಇದ್ದಲ್ಲಿ -- ಎಂದೋ ಭೂಮಿಯನ್ನು ಕೊಟ್ಟುಬಿಡುತ್ತಿದ್ದ. ಅದು ನಮ್ಮವರಿಗೆ "ಕನ್ನಡಿಯೊಳಗಿನ ಗಂಟು" ಎಂಬುದು ತಿಳಿಯದೇ ನೋ. ಪರಮಾತ್ಮಾ ಅವರು ಏನೂ ತಿಳಿಯದ ಮಕ್ಕಳೇ? ಯಾರ ಅಭಿಪ್ರಾಯ ಹೇಗೇ ಇರಲಿ. ನನ್ನ ಅಭಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| | *ಆರ್ಜಿತ | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ಪ್ರಾಯವನ್ನು ಕೇಳುವುದಾದರೆ - ಹೇಳುತ್ತೇನೆ ಕೇಳ ಎಂದು ಕೊಂಚ ರೋಷದಿಂದಲೇ ನುಡಿದಳ "ಹೇಳು ತಂಗಿ, ಹೇಳು. ನಿನ್ನ ಅನಿಸಿಕೆಯನ್ನು, ಅಭಿ ಪ್ರಾಯವನ್ನು ಕೇಳಲೆಂದೇ ನಾನು ಇಲ್ಲಿಗೆ ಬಂದದ್ದು ನಿನ್ನ ಹೇಳಿಕೆಯೂ ನನಗೆ ಮುಖ್ಯ. ನೀನು ಪಾಂಡವರಿಗೆ ಸಂಬಂಧಿಸಿದವಳೇ ಅಲ್ಲವೇ." ಎಂದ ಯಾದವರ ಅರಸ (ಕೃಷ್ಣ).

ತರುವಾಯ ದ್ರುಪದ ನಂದನೆಯು, ಹೇ ದ್ವಾ ಕಾನಾಯಕಾ, ನಿನ್ನ ಬಾವನವರ ಮಾತಿ ಮೇಲೆ ನನಗೆ ಭರವಸೆಯೇ ಹೊರಟುಹೋ ಗಿದೆ. ಅಂತೆಯೇ, ಆ ಧೂರ್ತ ದುರ್ಯೋಧ ನನು (ಭೂಮಿಯನ್ನು) ಅರ್ಧರಾಜ್ಯವನ್ನು ಕೊಡು ತ್ತಾನೆಂಬ ವಿಷಯದಲ್ಲಿಯೂ ನನಗೆ ಭರವಸೆ -- ವಿಶ್ವಾಸವಿಲ್ಲ. ಹಾಗೊಂದು ವೇಳೆ--

ಅವನು ರಾಜ್ಯವನ್ನು ಕೊಡಲು ನಿರಾಕರಿಸಿದಲ್ಲಿ-- ವಾಸುದೇವಾ, "ಯುದ್ಧವನ್ನೇ ಘೋಷಿಸಿ ಬಾ" ಎಂದು ಗುಡುಗುತ್ತಾಳೆ. ವೀರಾವೇಶದ ಅವಳ ಮಾತುಗಳನ್ನು ಕೇಳಿದ ದೇವಕೀಸುತನು ಶಹ ಬ್ಬಾಸ್ ತಂಗಿ, ನಿನ್ನ ಕುಲಕ್ಕೆ ತಕ್ಕ ಮಾತೇ ಆಡಿರುವೆ. ನಿನ್ನಲ್ಲಿ ಪೌರುಷತ್ವವು ಮೆರೆದಿದೆ ಎಷ್ಟೇ ಆದರೂ ನೀನು ಅಗ್ನಿಯ ಮಗಳಲ್ಲವೇ?

"ನೋಡು ತಂಗಿ ದ್ರೌಪದಿ, ನಿನ್ನಲ್ಲಿ ನಿಜಹೇಳ ಬೇಕೆಂದರೆ - ನಿನ್ನ ಮನೋಭಾವವೇ ನನ್ನದೂ ಕೂಡ. ಪರಸ್ಪರರ ಸಂಧಿಮಾಡಿಸುವುದು ನನಗೂ ಇಷ್ಟವಿಲ್ಲ. ನನ್ನ ಮನಸ್ಸಿನಲ್ಲಿರುವುದನ್ನು ನೀನೇ ಆಡಿರುವೆ. ತಂಗಿ 'ಧರ್ಮವು' ನೆಲೆನಿಲ್ಲಬೇಕಾದರೆ ದುಷ್ಟಶಿಕ್ಷಣ ಆಗಲೇ ಬೇಕಲ್ಲದೇ ಬೇರೆದಾರಿಯೇ ಇಲ್ಲ. ಕೇಳು ತಂಗಿ ಅವರ ನಾಶಕ್ಕೆ ಅವರೇ ಸಿದ್ಧತೆ ಮಾಡಿಕೊಳ್ಳುತ್ತಿದ್ದಾರೆ. ಇದರಲ್ಲಿ ಸಂದೇಹವಿಲ್ಲ. "ವೀರವನಿತೆ"ಯಾದ ನಿನ್ನ ಸಂಕಲ್ಪವೇ ನೆರವೇರಲಿ. ನಾನಿನ್ನು ಬರುತ್ತೇನೆ" ಎಂದು ಹೇಳಿ ಹೊರಡುತ್ತಾನೆ ವಾಸುದೇವ.

ದ್ರೌಪದಿಯಿಂದ ಬೀಳ್ಕೊಂಡ ಪರಮಾತ್ಮನು ಹಸ್ತಿನ ಪುರಕ್ಕೆ ಬಂದು, ದಾಸೀಪುತ್ರನಾದ ವಿದ್ವಾನ್ -- ವಿದುರನಿಗೆ ದರ್ಶನಕೊಟ್ಟು ಅವನ ಆತಿಥ್ಯವನ್ನು ಪ್ರೀತಿಯಿಂದ ಸ್ವೀಕರಿಸಿ -- ನಂತರ ದುರ್ಯೋಧ ನನ ಸಮಯವೇನು ತಿಳಿದು ಬಾ ಎಂದು ವಿದುರ ನನ್ನು ಕಳುಹಿಸುತ್ತಾನೆ.

ಮರುಕ್ಷಣದಲ್ಲಿ ಅರಮನೆಯಿಂದ ಮರಳಿದ ವಿದುರ 'ವಾಸುದೇವಾ, ದುರ್ಯೋಧನನ ಭೇಟಿಗೆ ಇದು ತಕ್ಕ ಸಮಯ. ಅವನು ಈಗ ಸಭೆನಡೆಸುತ್ತಿ ದ್ದಾನೆ. ನಾವು ಹೊರಡಬಹುದಲ್ಲವೇ?' ನೀತಿಜ್ಞ

ನಾದ ವಿದುರನ ಮಾತಿಗೆ ಸಂತಸಗೊಂಡ ಕೃಷ್ಣನು ಅವನೊಂದಿಗೆ ಅರಮನೆಗೆ ಹೊರಟ.

ಅತ್ತ ಸುಯೋಧನನಿಗೆ ವಿದುರನ ಆಗಮನದ ನಂತರ ಕೃಷ್ಣನ ಬಗ್ಗೆ ಕೋಪ ಉಕ್ಕಿತ್ತು. ಅವನ ಬರುವಿಕೆಗೆ ಮುನ್ನವೇ ಶ್ರೀಕೃಷ್ಣನು ಹಸ್ತಿನಪುರಕ್ಕೆ ಬಂದಿಳಿದಿರುವ ವಿಷಯ ತಿಳಿದಿರುತ್ತದೆ. ಅವನು ತನ್ನ ಭೇಟಿಗೂ ಬಂದೇ ಬರುವನೆಂಬ ಭರವಸೆಯಿಂದ ಅವನ ಆತಿಥ್ಯಕ್ಕಾಗಿ ಸಂಭ್ರಮದಿಂದ ಮೃಷ್ಟಾನ್ನದ ತಯಾರಿ ಮಾಡಿಸಿ ಅರಮನೆಯ ಬಾಗಿಲಲ್ಲಿ ಕಾಯುತ್ತ ನಿಂತು ವಾಸುದೇವನ ಬರವನ್ನು ನಿರೀಕ್ಷಿಸುತ್ತಿರುವಾಗ ವಿದುರನ ಮನೆಯಲ್ಲಿ ಅವನಿಗೆ ಆತಿಥ್ಯವಾಯ್ತೆಂಬ ವಿಷಯ ತಿಳಿದು ಕುಪಿತನಾಗಿ ರಾಜಸಭೆಗೆ ಹೋಗಿ ಸಿಂಹಾಸನವೇರಿ, ನೆರೆದ ಸಭಿಕರಿಗೆ, 'ಸಭಾಸದರೇ -- ಇನ್ನೆರಡು ಘಳಿಗೆಯಲ್ಲಿ ಗೋಪಾಲಕನಾದ ಗೊಲ್ಲಕೃಷ್ಣನು ನನ್ನ ಭೇಟಿಗೆ ಬರುತ್ತಾನೆ. ಅವನು ಬಂದಾಗ -- ಕುಳಿತಲ್ಲಿಂದ ಎದ್ದು (ಯಾರೂ) ನಿಂತು ಅವನಿಗೆ ಗೌರವ ಕೊಡಬಾರದು. ಹಾಗೆ ಯಾರೇ ಆಗಲಿ ಎದ್ದು ನಿಂತಲ್ಲಿ ಅವರಮೇಲೆ ನಾನು ಕಠಿಣ ಕ್ರಮ ಜರುಗಿಸುತ್ತೇನೆ' ಎಂದು ಎಚ್ಚರಿಕೆ ನೀಡಿದ. ಸಭೆಯಲ್ಲಿ ಸದ್ದಡಗಿದೆ. ಮೌನ ಆವರಿಸಿದೆ. ಸ್ವಲ್ಪಸಮಯದ ನಂತರ -- ಶ್ರೀಕೃಷ್ಣನು ವಿದುರನ ಹೆಗಲ ಮೇಲೆ ಕೈಯಿರಿಸಿ ಅವನೊಂದಿಗೆ ಸಭೆಯನ್ನು ಪ್ರವೇಶಿಸಿ ಗಂಭೀರ ನಡಿಗೆಯಲ್ಲಿ ಬರುತ್ತಿದ್ದಾನೆ. ಸಿಂಹ ವಿಷ್ಟರದ ಮೇಲೆ ಆಸೀನನಾದ ದುರ್ಯೋಧನನು ಮಾತ್ರ (ತನ್ನ) ಕಾಲ ಮೇಲೆ ಕಾಲುಹಾಕಿ ಎತ್ತಲೋ ದೃಷ್ಟಿಬೀರಿ, ಕೃಷ್ಣನು ಬಂದುದು ತಿಳಿದರೂ ನೋಡಿಯೂ ನೋಡದಂತೆ ಉದಾಸೀನನಾಗಿ ಕುಳಿತಿದ್ದಾನೆ.

ಈ ಮುನ್ನವೇ ವಾಸುದೇವ ಕೃಷ್ಣನು ರಾಜಸಭೆಯನ್ನು ಪ್ರವೇಶಿಸುತ್ತಿದ್ದಂತೆ ಸುಯೋಧನನ ಬಲ - ಎಡ ಪಕ್ಕಗಳಲ್ಲಿ ಆಸೀನರಾಗಿದ್ದ 'ಭೀಷ್ಮ-ದ್ರೋಣರು ಎದ್ದು ನಿಂತರು. ಅವರುಗಳು ನಿಲ್ಲುತ್ತಿದ್ದಂತೆ ಇಡೀ ಸಭೆಗೆ ಸಭೆಯೇ ಧಗ್ಗನೆ ಎದ್ದುನಿಂತಿತ್ತು. ಶ್ರೀಕೃಷ್ಣನಿಗೆ ಗೌರವ ಸಲ್ಲಿಸಿತ್ತು.

ದುರ್ಯೋಧನನ ಕೋಪ ಮಿತಿಮೀರಿತ್ತು. ಸಭೆಯ ಕಡೆಗೊಮ್ಮೆ ಕುಳಿತೇ ದುರದುರುಗುಟ್ಟಿ ನೋಡಿದ. ಕೃಷ್ಣನ ಕಡೆ ಗಮನವೇ ಇಲ್ಲ. ಅವನಲ್ಲಿ ಅಹಂಕಾರ ಮನೆಮಾಡಿತ್ತು. ಆದರೆ ಸರ್ವಜ್ಞ ಮೂರ್ತಿಯಾದ ಶ್ರೀಕೃಷ್ಣನ ಸಂಕಲ್ಪವೇ ಬೇರೆಯಾಗಿತ್ತು. ಅವನು ಗಂಭೀರವಾಗಿ ನಡೆದು ಬರುತ್ತಾ ಸುಯೋಧನನ ಸಿಂಹ ವಿಷ್ಟರದ ಸಮೀಪ ಬಂದು ಅದರ ಮೊದಲ ಸೋಪಾನವನ್ನು (ಮೆಟ್ಟಿಲನ್ನು) ತನ್ನ ಬಲಗಾಲ (ಉಂಗುಟದಿಂದ) ಹೆಬ್ಬೆರಳಿನಿಂದ (ಒಮ್ಮೆ) ಒತ್ತಿದ. ಕೂಡಲೇ ದುರ್ಯೋಧನನು, ಒಮ್ಮೆಲೇ ಸಿಂಹಾಸನವೇ ಮಗುಚಲು ಶ್ರೀಕೃಷ್ಣನ ಕಾಲ ಬುಡದಲ್ಲಿ ಬಿದ್ದ. ಸಭೆಯೆಲ್ಲ ಗೊಳ್ಳನೆ ನಕ್ಕಿತು.

ವಾಸುದೇವ ಕೃಷ್ಣನು - ಓಹೋ, ದುರ್ಯೋಧನ ಸಾರ್ವಭೌಮರು ಹೀಗೆ ಜಾರ - ಚೋರನ ಕಾಲನ್ನು ಹಿಡಿಯುವುದೇ ? ಇದೆಂತಹ ಅನ್ಯಾಯ? ಎಂದು ಉಪಚಾರದ - ನಾಟಕವಾಡಿ, ತನ್ನ ಎರಡೂ ಕೈಗಳಿಂದ ಅವನ ಭುಜವನ್ನು ಹಿಡಿದೆತ್ತಿ ನಿಲ್ಲಿಸಿದ. ನೆಲಕ್ಕೆ ಬಿದ್ದರೂ ಮೀಸೆ ಮಣ್ಣಾಗಲಿಲ್ಲವೆಂಬಂತೆ ದುರ್ಯೋಧನನು ಯಾವರೀತಿಯ ಪ್ರತಿಕ್ರಿಯೆಯನ್ನೂ ತೋರದೆ - ಮೈಕೊಡವಿಕೊಂಡು ಸಿಂಹಾಸನವೇರಿ ಕುಳಿತ. ತರುವಾಯ--

ಶ್ರೀಕೃಷ್ಣನು ಮಿಕ್ಕೆಲ್ಲರನ್ನೂ ಕುಳ್ಳಿರಲು .ಹೇಳಿ, ಮೊದಲು ತಾನೇ ಮಾತಿಗೆ ಆರಂಭಿಸಿದ. ಓ, ಕೌರವ ಜ್ಯೇಷ್ಠನೇ, ನಾನು ಇಲ್ಲಿಗೆ (ಈಗ) ಬಂದ ಕಾರಣವನ್ನು ಹೇಳುವೆ ಕೇಳು. ಧರ್ಮರಾಯಾದಿ ಪಾಂಡವರೈದು ಮಂದಿಯೂ ಅಂದು ದ್ಯೂತದಲ್ಲಿ ಸೋತ ತರುವಾಯ - ಕಟ್ಟಳೆಯಂತೆ ವನವಾಸವನ್ನೂ ಮತ್ತು ಒಂದು ವರ್ಷದ ಅಜ್ಞಾತವಾಸವನ್ನೂ ಪೂರೈಸಿಕೊಂಡು ಮರಳಿ ತಮ್ಮ ನೆಲೆಗೆ ಬಂದಿದ್ದಾರೆ. ಅವರಿಗೂ ಈ ನೆಲದಲ್ಲಿ ಜೀವಿಸುವ ಹಕ್ಕು ಇದೆ. ಆದ್ದರಿಂದ ಇನ್ನಾದರೂ ವೈರತೊರೆದು, ಹಿಂದಿನದನೆಲ್ಲವನ್ನೂ ಮರೆತು 'ಅರ್ಧರಾಜ್ಯ'ವನ್ನು ಅವರಿಗೆ ಕೊಟ್ಟು, ಅವರನ್ನು ಬದುಕಲು ಬಿಟ್ಟು ನೀನೂ ನೆಮ್ಮದಿಯಿಂದ ಬದುಕು' ಎಂದ. ವಾಸುದೇವನ ಮಾತುಕೇಳಿದ ಧಾರ್ತರಾಷ್ಟ್ರನು ಸಿಂಹಪೀಠದಿಂದೆದ್ದು ಕೋಪದಿಂದ "ಏನು ಹೇಳುತ್ತಿರುವೆ ? ಯಾದವ ? ಆ ಪಾಂಡವರಿಗೆ ಅರ್ಧರಾಜ್ಯವನ್ನು ಕೊಡಬೇಕೆ ? ಅದು ಸಾಧ್ಯವಿಲ್ಲದ ಮಾತು.

"ಅವರಿಗೆ ಭೂಮಿಬೇಕಾದರೆ - ಯುದ್ಧಮುಖವಾಗಿಯೇ ಪಡೆದುಕೊಳ್ಳಲಿ" ಎಂದು ಗುಡುಗಿದ. ನಂತರ, ವಾಸುದೇವನು ಮತ್ತೆ ಧಾರ್ತರಾಷ್ಟ್ರನನ್ನು ಕುರಿತು "ಅಯ್ಯಾ ಕುರುಕುಲ ಸಾರ್ವಭೌಮ, ನಾನು ಹೇಳುವ ಈ ಐದು ಗ್ರಾಮಗಳನ್ನಾದರೂ, ಪಾಂಡವರಿಗೆ ಕೊಟ್ಟು ಪುಣ್ಯಕಟ್ಟಿಕೊ--

ಇಂದ್ರಪ್ರಸ್ಥಂ ವೃಕಪ್ರಸ್ಥಂ
ಜಯಂತಂ ವಾರಣಾವತಂ
ದೇಹಿ ಮೇ ಚತುರೋಗ್ರಾಮಾ
ಪಂಚಮಂ ಕಂಚಿದೇವತು

ಇಂದ್ರಪ್ರಸ್ಥ - ವೃಕಪ್ರಸ್ಥ - ಜಯಂತ - ವಾರಣಾವತ, 'ಈ ನಾಲ್ಕಲ್ಲದೇ ಬೇರೆಯಾವುದಾದರೊಂದು ಗ್ರಾಮವನ್ನು ಸೇರಿಸಿ ಅವರ ಜೀವನಕ್ಕೆ ದಾರಿಮಾಡಿಕೊಡು -- ಎಂದ ಶ್ರೀಕೃಷ್ಣನ ಮಾತುಗಳನ್ನು ಕೇಳಿದ ಕೌರವನು -- ಏನು ಐದು ಗ್ರಾಮಗಳನ್ನು ಕೊಡಬೇಕೆ ನಿನಗೆಲ್ಲಿಯೋ ಭ್ರಾಂತು ಕೃಷ್ಣಾ - ಆ ಪಾಂಡವರಿಗೆ ಹೇಳು--

ಅರ್ಧರಾಜ್ಯವನ್ನಲ್ಲ, ಐದು ಗ್ರಾಮಗಳನ್ನಲ್ಲ "ಸೂಜಿಯ ಮೊನೆಗೆ" ಹತ್ತುವಷ್ಟು ಮಣ್ಣನ್ನೂ ಈ ನೆಲದಿಂದ ಕೊಡುವುದಿಲ್ಲವೆಂದು. ಅವರಿಗೆ ಈ ನೆಲದಲ್ಲಿ ನೆಲೆಬೇಕಾಗಿದ್ದರೆ -- ಪೌರುಷದಿಂದಲೇ ಪಡೆಯುವಂತೆ ತಿಳಿಸು. ಇದು ನನ್ನ ಅಚಲ ನಿರ್ಧಾರ ಎಂದು ಕಡ್ಡಿಯನ್ನು ಎರಡು ತುಂಡು ಮಾಡಿದಂತೆ -- ಪಾಂಡವ ಪ್ರಾಣನಾದ ಶ್ರೀಕೃಷ್ಣನ ಮಾತನ್ನು ನಿರಾಕರಿಸಿಬಿಟ್ಟ ದುರ್ಯೋಧನ. ಅವನ ದೃಢ ನಿರ್ಧಾರದ ಮಾತುಗಳನ್ನು ಕೇಳಿದ ಪರಮಾತ್ಮನು,

ಸಭಿಕರೆಡೆ ತಿರುಗಿ, ಕೇಳಿದಿರಾ ಕೌರವೇಂದ್ರನ ನಿರ್ಧಾರವನ್ನು, ಪಾಂಡವ ಕೌರವರ ನಡುವೆ ಯುದ್ಧವು ಅನಿವಾರ್ಯವೆಂದು ಘೋಷಿಸಿ -- ಅರಮನೆಯಿಂದ ಹೊರನಡೆದ. ತನಗೂ ಮತ್ತು ಧಾರ್ತರಾಷ್ಟ್ರನಿಗೂ ನಡೆದ ಸಂಭಾಷಣೆಯನ್ನೂ, ಅವನ ದೃಢನಿರ್ಧಾರವನ್ನೂ - ಪಾಂಡವರಿಗೆ ತಿಳಿಸಿ, ಅವರಿಗೆ ಸಮರ ಸಿದ್ಧತೆಯ ಅನಿವಾರ್ಯತೆಯನ್ನರುಹಿ - ದ್ವಾರಕೆಗೆ ಹೊರಟು ನಿಂತ. ಪವಿತ್ರ ಚರಿತ್ರನಾದ ಪರಮಾತ್ಮನನ್ನು ಪ್ರತ್ಯೇಕವಾಗಿ ದರ್ಶನ ಮಾಡಿ ದ್ರುಪದನಂದನೆಯು ಭಕ್ತಿಯಿಂದ ಅವನಡಿಗಳಿಗೆರಗಿ, ಕೃಷ್ಣಾ, ವಾಸುದೇವಾ, ಫಲಿತಾಂಶವೇನಾಯಿತು ಎಂದಳು ಕಾತುರ ತುಂಬಿದ ಕಣ್ಣುಗಳಿಂದ - ಪರಮಾತ್ಮನನ್ನು ನೋಡುತ್ತ. ವಾಸುದೇವನು- ಇನ್ನೇನು ತಂಗಿ, ಕಡೆಗೂ ನಿನ್ನ ಸಂಕಲ್ಪವೇ ಗೆದ್ದಿತು. ದುಷ್ಟಶಿಕ್ಷಣವಾಗದೇ ಶಿಷ್ಟರಕ್ಷಣ ಧರ್ಮ ಪರಿಪಾಲನಕಾರ್ಯ ನಡೆಯದು ತಂಗಿ. ನಿನ್ನ ಸಂಕಲ್ಪ ಸಾಕಾರವಾಗಿ ಯುದ್ಧ ಘೋಷಣೆಗೆ ಪ್ರೇರಣೆ ನೀಡಿತ್ತು. ಎಷ್ಟೇ ಆಗಲಿ ನೀನು - "ವೀರವನಿತೆ"ಯಲ್ಲವೇ. ಎಂದು ಆಕೆಯನ್ನು ಹರಸಿ ವಾಸುದೇವನು ದ್ವಾರಕೆಗೆ ಮರಳಿದ.



# ತಿರುಮಲೆ -- ತಿರುಪತಿ ದೇವಸ್ಥಾನಗಳು -- ತಿರುಪತಿ.

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನಿ ಯೋಜನೆ

ಶ್ರೀ ವೇಂಕಟೇಶ್ವರಸ್ವಾಮಿಯ ಸನ್ನಿಧಿಯಿರುವ ತಿರುಮಲೆ ಪ್ರಾಚೀನ ಕಾಲದಿಂದಲೂ ಯಾತ್ರಿಕರ ಆಕರ್ಷಣಕೇಂದ್ರವಾಗಿದೆ. ಪ್ರತಿದಿನವೂ ಸಾವಿರಾರು ಮಂದಿ ಭಕ್ತ ಯಾತ್ರಿಕರು ತಮ್ಮ ಐಹಿಕ ಆಧ್ಯಾತ್ಮಿಕ ಅಭಿವೃದ್ಧಿಗಾಗಿ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ತಿ. ತಿ. ದೇವಸ್ಥಾನಗಳು ಮಾನವಸೇವೆಯಲ್ಲಿ ಶ್ರದ್ಧಾಪೂರ್ವಕವಾಗಿ ಭಾಗವಹಿಸುವ ಪರಂಪರೆಯನ್ನು ಹೊಂದಿದೆ. ಕುಷ್ಠರೋಗ ನಿವಾರಣಾಕೇಂದ್ರ, ಅಂಗವಿಕಲರ ಅಭಿವೃದ್ಧಿ ಕೇಂದ್ರ, ಅನಾಥ ಶರಣಾಲಯ, ಕೇಂದ್ರ ಆಸ್ಪತ್ರೆ ಮೊದಲಾದವನ್ನು ತಿ.ತಿ.ದೇ. ಯಶಸ್ವಿಯಾಗಿ ನಿರ್ವಹಿಸುತ್ತಿದೆ. ಜನಕ್ಕೆ ವಿಶೇಷ ಆಧುನಿಕ ವೈದ್ಯಕೀಯ ಸೇವೆ ಸಲ್ಲಿಸಲು ಸ್ವಾಮಿಯ ಆಶೀರ್ವಾದದ ಬೆಂಬಲದಿಂದ ಶ್ರೀ ವೆಂಕಟೇಶ್ವರ ವೈದ್ಯಕೀಯ ಸಂಸ್ಥೆ (ಸ್ವಿಮ್ಸ್)ಯನ್ನು -- ದೆಹಲಿ, ಅಜ್ಮೀರ, ಪಾಂಡಿಚೇರಿ, ಚಂಡೀಘರ್‌ಗಳ ಆಲಿಂಡಿಯಾ ಇನ್ಸ್‌ಟ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಮಾದರಿಯಲ್ಲಿ ಆರಂಭಿಸಲಾಗಿದೆ. ಶ್ರೀ ವೆಂಕಟೇಶ್ವರ ವೈದ್ಯವಿಜ್ಞಾನ ಸಂಸ್ಥೆಯ ಮೂಲ ಉದ್ದೇಶ -- ಮನುಷ್ಯನ ಸರ್ವಾಂಗೀಣ ಆರೋಗ್ಯಸಾಧನೆ -- ಇಲ್ಲಿ ವೈದ್ಯಸೇವೆ, ವೈದ್ಯವಿಜ್ಞಾನದ ಶಿಕ್ಷಣ -- ತರಬೇತಿಗಳೊಡನೆ ಸಂಶೋಧನೆ ಅಭಿವೃದ್ಧಿಯನ್ನೂ ನಡೆಸಲಾಗುವುದು.

ಇಂತಹ ವೈದ್ಯವಿಜ್ಞಾನದ ಬಾಗಿಲು ನಮ್ಮಲ್ಲಿನ ಎಲ್ಲರಿಗೂ ತೆರೆದಿರಬೇಕು. ಅದನ್ನು ಸಾಧಿಸಲೆಂದೇ ಶ್ರೀ ಬಾಲಾಜಿ ಆರೋಗ್ಯವರ ಪ್ರಸಾದಿನಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ವಿಶೇಷ ತಜ್ಞ ವೈದ್ಯಕೀಯ ಸೇವೆಯು ಎಲ್ಲರಿಗೂ ಸುಲಭವಾಗಿ ದೊರೆಯುವಂತೆ ಮಾಡಲು ದಾನಿಗಳಿಂದಲೂ ಸಾರ್ವಜನಿಕರಿಂದಲೂ ಉದಾರವಾದ ದೇಣಿಗೆಗಳನ್ನು ನಿರೀಕ್ಷಿಸಲಾಗಿದೆ.

ಯೋಜನೆಯ ಸಾರಾಂಶ ಹೀಗಿದೆ :---

* ದಾನಿಗಳು ರೂ 1000-- ಅಥವಾ ಗುಣಕಗಳಲ್ಲಿ ದಾನ ನೀಡಬಹುದು. ಅದಕ್ಕೆ ಸಮನಾದ ಧನವನ್ನು ತಿ.ತಿ.ದೇ. ಸೇರಿಸಿ ಮೊತ್ತದ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿರಿಸಿ ಅದರ ಬಡ್ಡಿಯನ್ನು ಬಡವರ, ವೈದ್ಯಕೀಯ ಚಿಕಿತ್ಸೆಗಾಗಿ ಬಳಸಲಾಗುವುದು.
* ಹತ್ತು ಲಕ್ಷ ಹಾಗೂ ಹೆಚ್ಚಿನ ಧನವನ್ನು ನೀಡುವವರ ಹೆಸರಿನಲ್ಲಿ ಒಂದು ಸಂಶೋಧನ ಪೀಠವನ್ನು ಸ್ಥಾಪಿಸಲಾಗುವುದು.
* ದಾನವನ್ನು ವ್ಯಕ್ತಿ / ಕುಟುಂಬ / ಕಂಪನಿ / ಯಾರಾದರೂ ಮಾಡಬಹುದು.
* ಐದು ಲಕ್ಷ ರೂಗಳಿಗಿಂತ ಹೆಚ್ಚಿಗೆ ದಾನ ನೀಡುವವರ ಹೆಸರನ್ನು ಸಂಸ್ಥೆಯ ಸ್ವಾಗತಕಚೇರಿಯಲ್ಲಿ ಬರೆದು ಪ್ರದರ್ಶಿಸಲಾಗುವುದು.
* ಪ್ರಯೋಜನ ಪಡೆದು ಆರೋಗ್ಯಹೊಂದಿದವರ ಡಿಸ್ಚಾರ್ಜ್ ಚೀಟಿಯಲ್ಲಿ ದಾನಿಗಳ ಹೆಸರನ್ನು ನಮೂದು ಮಾಡಲಾಗುವುದು.

## ದಾನಿಗಳಿಗೆ ನೀಡಲಾಗುವ ಸೌಕರ್ಯಗಳು :

* ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನಿ ಯೋಜನೆಗೆ ನೀಡಲಾದ ದಾನ 80 ಜಿ. ಕಲಮಿನನ್ವಯ ಆದಾಯಕರ ಮುಕ್ತ.
* ಆಸ್ಪತ್ರೆಯಲ್ಲಿ ದಾನಿಗಳ ಕುಟುಂಬಕ್ಕೆ ಬಾಡಿಗೆ ಕೋಣೆ ಹವಾನಿಯಂತ್ರಿತ ಕೋಣೆಗಳನ್ನು ನೀಡಲಾಗುವುದು
* 5 ಲಕ್ಷ ಮತ್ತು ಹೆಚ್ಚಿನ ಹಣದ ದಾನಿಗಳ ಹೆಸರಿನಲ್ಲಿ ಬಾಡಿಗೆ ಕೋಣೆಗಳನ್ನೂ ನಿರ್ಮಿಸಲಾಗುವುದು.
* 5 ಲಕ್ಷ ಹಾಗೂ ಹೆಚ್ಚಿನ ಹಣದ ದಾನದಿಂದ ದಾನಿಗಳು ಪ್ರತಿವರ್ಷ ಒಂದು ಚಿಕಿತ್ಸೆಯನ್ನು ಪ್ರಾಯೋಜಿತಗೊಳಿಸಬಹುದು.
* ದಾನಿಗಳು ಒಳರೋಗಿಗಳ, ಹೊರರೋಗಿಗಳ, ಆಹಾರಕ್ಕಾಗಿಯೂ ನೀಡಬಹುದು. ಸಂಸ್ಥೆಯಲ್ಲಿನ ವಾರ್ಷಿಕ ಸಾರಿಗೆ ವೆಚ್ಚಗಳಿಗೂ ನೀಡಬಹುದು.

  ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು -- ನಿರ್ದೇಶಕರು ಶ್ರೀ ವೆಂಕಟೇಶ್ವರ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ -- ಇವರಿಗೆ ಕಳುಹಿಸುತ್ತ ಜೊತೆಗೇ ಕೆಳಕಂಡ ವಿವರಗಳನ್ನೂ ಎಲ್ಲ ದಾನಿಗಳೂ ನೀಡಬೇಕು.
* ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ಹಣ ದಾನಮಾಡುವವರ ಹೆಸರು ವಿಳಾಸಗಳೊಡನೆ ಅವರ ಮನೆಯ ಎಲ್ಲ ಸದಸ್ಯರ ಪಾಸ್‌ಪೋರ್ಟ್ ಸೈಜಿನ ಈಚಿನ ಭಾವಚಿತ್ರ ಇರಬೇಕು.
* ಆದಾಯತೆರಿಗೆ ವಿನಾಯತಿಯ ಪ್ರಮಾಣ ಪತ್ರವನ್ನು ಯಾರ ಹೆಸರಿಗೆ ನೀಡಬೇಕು ಎಂಬುದು.
* ದಾನಿಗಳು ಇತರತ್ರ ಯಂತ್ರ ಉಪಕರಣಗಳನ್ನು ನೀಡಲೂ ಅವಕಾಶವಿದೆ, ಅಥವಾ ವಾಹನಗಳನ್ನೂ ನೀಡಬಹುದಾಗಿದೆ. ಗ್ರಾಮೀಣ ಪ್ರಾಂತ್ಯಗಳಲ್ಲಿ ತಿ. ತಿ. ದೇವಸ್ಥಾನಗಳ ಆರೋಗ್ಯವಿಸ್ತರಣಾ ಶಿಬಿರಗಳನ್ನೂ ಪ್ರಾಯೋಜಿತಗೊಳಿಸಬಹುದು.

ಮಿಕ್ಕ ವಿಷಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ--

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ, ತಿರುಪತಿ, ದೇವಸ್ಥಾನಗಳು -- ತಿರುಪತಿ.

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್ಸಿಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ.

# ಪುಣ್ಯಕ್ಷೇತ್ರ ಶ್ವೇತಾಚಲ (ಬಿಳಿಗಿರಿ ರಂಗನ ಬೆಟ್ಟ)

---ಪ್ರೊ ಹಾರೋಹಳ್ಳಿ ತಿರುವೇಂಗಡಶರ್ಮ.

ಶ್ವೇತಾಚಲ ಎಂಬ ಪುಣ್ಯಕ್ಷೇತ್ರವು ಕರ್ನಾಟಕರಾಜ್ಯದ ಮೈಸೂರು ಜಿಲ್ಲೆಯ ಯಳಂದೂರು ತಾಲ್ಲೂಕ್ಕಿನಲ್ಲಿರುವುದು. ಇದು ಪೂರ್ವ ಪಶ್ಚಿಮ ಘಟ್ಟಗಳು ಸಂಗಮವಾಗಿರುವ ದಟ್ಟ ಅರಣ್ಯದ ನಡುವಿನಲ್ಲಿರುವ ರಮಣೀಯಸ್ಥಾನ. ಶ್ರೀ ಶ್ವೇತಾದ್ರಿ, ಶ್ವೇತಾಚಲ, ಶ್ವೇತಶೈಲ, ಶಿತಗಿರಿ ಎಂಬ ಹೆಸರುಗಳಿದ್ದರೂ ಬಿಳಿಗಿರಿರಂಗನ ಬೆಟ್ಟ ಎಂಬ ಕನ್ನಡದ ಹೆಸರಿನಿಂದಲೇ ಈ ಕ್ಷೇತ್ರ ಪ್ರಸಿದ್ಧವಾಗಿದೆ.

ಈ ಶ್ವೇತಾಚಲದ ಮಹಾತ್ಮವು ಬ್ರಹ್ಮಾಂಡಪುರಾಣದಲ್ಲಿ ವರ್ಣಿತವಾಗಿದೆ. ನೈಮಿಷಾರಣ್ಯವಾಸಿಗಳಾದ ಶೌನಕ, ಅಗಸ್ತ್ಯ, ಗೌತಮ, ಜಾಬಾಲಿ, ಕಶ್ಯಪ, ಉದ್ದಾಲಕ, ಭರದ್ವಾಜ, ಪುಲಸ್ತ್ಯ, ರೋಮಶ, ವಾಮದೇವ, ಕಣ್ವ, ಅತ್ರಿ, ಭೃಗು, ಮಾಂಡವ್ಯ, ಕಪಿಲ, ಶಾಡಿಲ್ಯ, ಶಂಖ, ವಾಲಖಿಲ್ಯ, ಹಾರೀತರೇ ಮೊದಲಾದ ಋಷಿ ಮಹಾಮುನಿಗಳು ಒಂದು ಬಾರಿ ಶ್ವೇತಾಚಲ ಮಹಾತ್ಮೆಯನ್ನು ತಿಳಿದುಕೊಳ್ಳಲು ಸೂತಪುರಾಣಿಕರಲ್ಲಿ ಬೇಡುವರು. ಸೂತಪುರಾಣಿಕರು ಆ ಮುನಿವೃಂದಕ್ಕೆ ವಿವರಿಸಿದ ಶ್ವೇತಾಚಲ ಮಹಾತ್ಮವು ಈ ರೀತಿ ಇರುವುದು.

ಭೃಗುಮಹರ್ಷಿ(ಜಮದಗ್ನಿ)ಗಳಿಗೆ ಮಹಾಪತಿವ್ರತೆ ರೇಣುಕಾದೇವಿ ಎಂಬ ಪತ್ನಿಯಿದ್ದಳು. ಪ್ರತಿದಿ



ನವೂ ನದಿಯಲ್ಲಿ ಮಿಂದು ಅಲ್ಲಿನ ಮರಳಿನಲ್ಲಿಯೇ ಮಡಕೆಯೊಂದನ್ನು ಮಾಡಿ ಅದರಲ್ಲಿ ಪವಿತ್ರಜಲವನ್ನು ಆಶ್ರಮಕ್ಕೆ ತಂದು ಪೂಜಾಪಾಕಾದಿಗಳಿಗೆ ಉಪಯೋಗಿಸುತ್ತಿದ್ದಳು. ಆಕೆ ಒಂದು ದಿನ ಸ್ನಾನಕ್ಕಾಗಿ ನದಿಗೆ ಹೋಗುತ್ತಿರುವಾಗ, ಬಳಿಯಲ್ಲಿ ಮತಿವಂತನೆಂಬ ಗಂಧರ್ವನು ಒಬ್ಬ ಅಪ್ಸರೆಯೊಡನೆ ಕಾಮಕೇಳಿಯಲ್ಲಿ ನಿರತನಾಗಿರುವುದನ್ನು ನೋಡುತ್ತಾಳೆ. ಇದರಿಂದ ರೇಣುಕಾದೇವಿಯ ಮನಸ್ಸು ವಿಚಲಿತವಾಗಿ ವಿಕಾರವನ್ನನುಭವಿಸುತ್ತದೆ. ಆ ದಿನ ಸ್ನಾನ ಮುಗಿಸಿ ಮರಳಿನಿಂದ ಮಡಕೆ ಮಾಡಲಾಗಲಿಲ್ಲ ಮತ್ತು ಪವಿತ್ರ ಜಲವನ್ನು ತರಲೂ ಆಗಲಿಲ್ಲ. ದುಃಖದಿಂದ ಆಶ್ರಮಕ್ಕೆ ಮರಳಿದ ಪತ್ನಿಯನ್ನು ಕಂಡು ಜಮದಗ್ನಿ ಮುನಿಯು ಅವಳ ಶಿರಶ್ಛೇದನವೇ ಪ್ರಾಯಶ್ಚಿತ್ತವೆಂದು ಮಕ್ಕಳಿಗೆ ಆಜ್ಞಾಪಿಸಲು ಮೊದಲಿನ ನಾಲ್ಕು ಜನ ಪುತ್ರರು ಮಾತೃಹತ್ಯೆಗೆ ಅನುಮತಿಸಲಿಲ್ಲ. ಆದರೆ ಕಿರಿಯ ಪುತ್ರ ಪರಶುರಾಮನು ತನ್ನ ಭಯಂಕರ ಗಂಡುಗೊಡಲಿಯಿಂದ ಒಂದೇ ಏಟಿಗೆ ತಾಯಿಯ ರುಂಡವನ್ನು ತುಂಡರಿಸಿದ. ಆಗ ಪಿತೃವಾಕ್ಯಪರಿಪಾಲಕನಾದ ಈ ಭಾರ್ಗವರಾಮನಿಗೆ ಎರಡು ವರಗಳನ್ನು ಜಮದಗ್ನಿ ಕೊಟ್ಟರು. ಮೊದಲನೆಯ ವರದಿಂದ ತನ್ನ ತಾಯಿಯು ಪುನರ್ಜನ್ಮಪಡೆದು ಪವಿತ್ರಳಾಗಬೇಕೆಂದೂ ಎರಡನೆಯದರಿಂದ ತನಗುಂಟಾಗಿರುವ ಮಾತೃಹತ್ಯಾದೋಷವು ಪರಿಹಾರವಾಗಬೇಕೆಂದು ಇಚ್ಛೆಸಿದನು. ಆಗ ಜಮದಗ್ನಿ ತನ್ನ ಕಮಂಡಲದ ಪವಿತ್ರ ಜಲವನ್ನು ಪ್ರೋಕ್ಷಿಸಿ ರೇಣುಕೆಯನ್ನು ಬದುಕಿಸಿದನು. ಮತ್ತು ಮಗನ ಮಾತೃಹತ್ಯಾದೋಷ ಪರಿಹಾರವಾಗಬೇಕಾದರೆ ಶ್ವೇತಾದ್ರಿಯಲ್ಲಿ ಅಷ್ಟಾಕ್ಷರ ಮಂತ್ರ ಜಪದಿಂದ ಶ್ರೀಹರಿಯನ್ನು ಒಲಿಸಿಕೊಂಡು ಅವನ ಪವಿತ್ರಪಾದೋದಕದಲ್ಲಿ ಸ್ನಾನ ಮಾಡಬೇಕೆಂದು ತಿಳಿಸಿದನು. ಅಂತೆಯೇ ಭಾರ್ಗವರಾಮನು ಈ ಶಿತಗಿರಿಗೆ ಬಂದು ಅಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ಕುಳಿತು ನಿರಾಹಾರನಾಗಿ ಅಷ್ಟಾಕ್ಷರವನ್ನು ದಶಸಂವತ್ಸರ ಪರ್ಯಂತ ಅಖಂಡವಾಗಿ ಜಪಿಸಲು



ಶ್ರೀಮನ್ನಾರಾಯಣನು ಪ್ರಸನ್ನನಾಗಲು, ಅನೇಕವಿಧದಿಂದ ಸ್ತೋತ್ರಮಾಡಿದನು. ಆಗ ವೈನತೇಯನಿಂದ ವೈತರಣಿನದಿಯ ಪುಣ್ಯಜಲವನ್ನು ತರಿಸಿ, ಸ್ವಾಮಿಯು ತನ್ನಪಾದಗಳನ್ನು ಆ ಜಲದಿಂದ ತೊಳೆಯಲು ಪರಶುರಾಮನಿಗೆ ತಿಳಿಸಿದನು. ಅದರಂತೆ ಮಾಡಲು ಆಗ ಭಾರ್ಗವಿನದಿಯು ಹರಿಯ ಪಾದಾರವಿಂದಗಳಿಂದ ಉದ್ಭವವಾಯಿತು. ಈ ಭಾರ್ಗವಿನದಿಯಲ್ಲಿ ಪರಶುರಾಮನು ಸ್ನಾನಮಾಡಲು ಮಾತೃಹತ್ಯಾದೋಷವು ಪರಿಹಾರವಾಗುತ್ತದೆ. ಈ ಪುಣ್ಯನದಿಯು ಈ ಕ್ಷೇತ್ರದಲ್ಲಿ ಭಕ್ತರ ಪಾಪಗಳನ್ನು ಈಗಲೂ ತೊಡೆದುಹಾಕುತ್ತಿರುವುದು.

ಈ ಶ್ವೇತಪರ್ವತ ಕ್ಷೇತ್ರದಲ್ಲಿ ಶ್ರೀನಿವಾಸದೇವರು ರಂಗನಾಥಸ್ವಾಮಿಯೆಂದು ವಸಿಷ್ಠರಿಂದ ಪ್ರತಿಷ್ಠಾಪಿಸಲ್ಪಟ್ಟ ಪರಿಯನ್ನು ಸೂತಪುರಾಣಿಕರು ವಿವರಿಸುವರು. ವಸಿಷ್ಠರು ನಂದಿನಿ ಧೇನುವಿನ ಸಂಬಂಧದಲ್ಲಿ ಕೌಶಿಕರಾಜನ ಆಗ್ರಹಕ್ಕೆ ತುತ್ತಾಗುತ್ತಾರೆ. ಆಗ ರಾಜನಾದ ಕೌಶಿಕನು ವಸಿಷ್ಠರ ಆಶ್ರಮವನ್ನು ಧ್ವಂಸಮಾಡಿ, ವಸಿಷ್ಠರ ನೂರುಮಂದಿ ಮಕ್ಕಳನೆಲ್ಲಾ ಕೊಂದು ನಂದಿನಿ ಧೇನುವನ್ನು ಪಡೆಯಲು ವಿಫಲನಾಗಿ, ಬ್ರಹ್ಮತೇಜಸ್ಸಿನ ಮುಂದೆ ಕ್ಷತ್ರಿಯ ಬಲವು ಕ್ಷುದ್ರಬಲ ಎಂದರಿತು, ತಾನೂ ಬ್ರಹ್ಮರ್ಷಿಯಾಗಬೇ

ಶ್ವೇತಾಚಲ, ಶಿತಗಿರಿ, ಎಂದೆಲ್ಲ ಕರೆಸಿಕೊಳ್ಳುವ ಮೈಸೂರುಜಿಲ್ಲೆಯ ಬಿಳಿಗಿರಿರಂಗನಬೆಟ್ಟ ಶ್ರೀನಿವಾಸನು ನೆಲೆಸಿದ ಸ್ಥಳವಾಗಿ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಅದರ ಪುರಾಣ ಕಥೆ ಇಲ್ಲಿ ವಿವರಿತವಾಗಿದೆ.



ಕೆಂದು ತಪಸ್ಸಿಗೆ ಹೋಗುತ್ತಾನೆ. ಶತಪುತ್ರರನ್ನೂ ಕಳೆಮಕೊಂಡ ಮಾತೆ ಅರುಂಧತಿ ದೇವಿಯು ಅವನನ್ನು ಶಪಿಸಲಿಲ್ಲ. ಮುಂದೆ ಈ ಕೌಶಿಕನು ವಿಶ್ವಾಮಿತ್ರ ಋಷಿಯಾಗಿ ಸವಿತೃ ದೇವತೆಯನ್ನು ಸಾಕ್ಷಾತ್ಕರಿಸಿಕೊಂಡು ಗಾಯತ್ರಿ ಮಂತ್ರವನ್ನು ಪ್ರಪಂಚಕ್ಕೆ ಅನುಗ್ರಹಿಸುವ ಶಕ್ತಿವಂತ, ಧೀಮಂತ ಅವನೆಂಬುವನ್ನು ಆ ದಿವ್ಯ ದಂಪತಿಗಳು ತಮ್ಮ ತಪಃಶಕ್ತಿಯಿಂದ ಅರಿತಿದ್ದರು. ಜಗತ್ಕಲ್ಯಾಣವನ್ನು ಬಯಸಿ ಮಕ್ಕಳನ್ನು ಕಳೆದುಕೊಂಡರೂ ಕ್ರುದ್ಧಳಾಗಲಿಲ್ಲ ಆ ಜಗನ್ಮಾತೆ. ಈಗ ವಸಿಷ್ಠರು ಅರುಂಧತಿ ಸಹಿತ ತಿರುಮಲ ಕ್ಷೇತ್ರಕ್ಕೆ ಹೋಗಿ ಸ್ವಾಮಿಪುಷ್ಕರಿಣಿಯಲ್ಲಿ ಮಿಂದು ಶ್ರೀನಿವಾಸನನ್ನು ಕುರಿತು ತಪಸ್ಸನ್ನಾಚರಿಸಿದರು. ಇವರ ಉಗ್ರ ತಪಸ್ಸಿಗೆ ಮೆಚ್ಚಿದ ಭಗವಂತನು ಪ್ರತ್ಯಕ್ಷನಾಗಿ ಅವರು ಶ್ವೇತಾಚಲದಲ್ಲಿ ಅಷ್ಟಾಕ್ಷರ ಮಂತ್ರ ಜಪವನ್ನಾಚರಿಸಿದರೆ ತಾನು ಅಲ್ಲಿಗೆ ಬಂದು ಇಷ್ಟಾರ್ಥವನ್ನು ನೆರವೇರಿಸುವುದಾಗಿ ತಿಳಿಸಿದನು. ಅಂತೆಯೇ ಆ ದಿವ್ಯದಂಪತಿಗಳು ಈ ಬಿಳಿಗಿರಿರಂಗನ ಕ್ಷೇತ್ರವನ್ನು ತಲಪಿ ಅಲ್ಲಿನ ಗಜಕುಂಡವೆಂಬ ಪುಣ್ಯಕರ ತೀರ್ಥದಲ್ಲಿ ಸ್ನಾನಮಾಡಿ ಅಷ್ಟಾಕ್ಷರೀ ಮಂತ್ರವನ್ನು ಜಪಿಸುತ್ತಾ ಒಂದು ವರ್ಷಕಾಲ ತಪಸ್ಸನ್ನಾಚರಿಸಲು ಭಗವಂತನು ಪ್ರತ್ಯಕ್ಷನಾದನು. ಆಗ ವಸಿಷ್ಠರು ಪುರುಷಸೂಕ್ತದಿಂದ ಭಗವಂತನನ್ನು ಸ್ತೋತ್ರಮಾಡಿದರು. ಸಂತುಷ್ಟನಾದ ಸ್ವಾಮಿಯು, ತನ್ನ ಅಂಶದಿಂದ ಒಬ್ಬ ಧನ್ಯಪುರುಷನು, ವಸಿಷ್ಠ ಅರುಂಧತಿಯರಿಗೆ ಮಗನಾಗಿ ಜನಿಸಿ ವೇದೋದ್ಧಾರಕನಾಗುವನೆಂದು ಅನುಗ್ರಹಿಸುವನು. ಆಗ ವಸಿಷ್ಠರು ಸ್ವಾಮಿಯನ್ನು ಈ ಶ್ವೇತಗಿರಿಯಲ್ಲಿ ನಿತ್ಯವಾಸಮಾಡಿಕೊಂಡಿದ್ದು ಭಕ್ತರನ್ನು ಅನುಗ್ರಹಿಸಬೇಕೆಂದು ಬೇಡುವರು. ಅದಕ್ಕೆ ತಥಾಸ್ತು ಎಂದ ಭಗವಂತನು ಶ್ರೀ, ಭೂದೇವಿಯರೊಡನೆ ನೆಲೆನಿಂತನು. ಆಗ ವಸಿಷ್ಠರು, ಸೂರ್ಯನು ಮೇಷರಾಶಿಯನ್ನು ಪ್ರವೇಶಿಸಿದಾಗ ವೈಖಾನಸಾಗಮರೀತ್ಯಾ ಶ್ರೀನಿವಾಸದೇವರನ್ನು ಮತ್ತು ಶ್ರೀದೇವಿಯವರನ್ನು ಪ್ರತಿಷ್ಠಾಪನೆ ಮಾಡಿ ಮಹೋತ್ಸವಗಳನ್ನು ಆಚರಿಸಿದರು. ಅವರೇ ಈಗ ರಂಗನಾಥ ಮತ್ತು ಶ್ರೀರಂಗನಾಯಕಿ ಅಮ್ಮನವರಾಗಿ ಇಂದಿಗೂ ನಮ್ಮನ್ನು ಈ ಕ್ಷೇತ್ರದಲ್ಲಿ ಅನುಗ್ರಹಿಸುತ್ತಿರುವರು. ಸ್ವಾಮಿಯ ಅನುಗ್ರಹದಿಂದ ವಸಿಷ್ಠರಿಗೆ ಅರುಂಧತಿಯಲ್ಲಿ ಸರ್ವಶಕ್ತಿ ಸಂಪನ್ನನಾದ ಶಕ್ತಿ ಎಂಬ ಮಗನು ಜನಿಸಿದನು. ಈ ಮಹಾಪುರುಷ ಶಕ್ತಿಗೆ ಪರಾಶರರೂ, ಮತ್ತು ಪರಾಶರರಿಗೆ ವ್ಯಾಸಮಹರ್ಷಿಗಳೂ, ಮತ್ತು ಅವರಿಗೆ ಶುಕಮಹರ್ಷಿಗಳು ಜನಿಸುವ ಮೂಲಕ ವಸಿಷ್ಠರ ವಂಶಾಭಿವೃದ್ಧಿಯಾಯಿತು.

ಇನ್ನು ಈ ಕ್ಷೇತ್ರದಲ್ಲಿರುವ ಗಜಕುಂಡದ ಮಹಿಮೆಯನ್ನು ಸೂತರು ವಿವರಿಸುತ್ತಾರೆ. ಭಸ್ಮಾಸುರನು ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡು ಭಸ್ಮಹಸ್ತವನ್ನು ಪಡೆಮಕೊಂಡನು. ಕೂಡಲೇ ಅವರ ಪ್ರಥಮ ಪರೀಕ್ಷೆಗೆ ವರವನ್ನಿತ್ತ ಮುಕ್ಕಣ್ಣನನ್ನೇ ಗುರಿಯಾಗಿಸಿಕೊಂಡು ಅಟ್ಟಿಸಿಕೊಂಡು ಹೋಗಲು, ಶಿವನು ಈ ಧೂರ್ತನಿಂದ ತಪ್ಪಿಸಿಕೊಂಡು ಶ್ರೀಹರಿಯ ಮರೆಹೊಕ್ಕು ಆ ರಾಕ್ಷಸನನ್ನು ಸಂಹರಿಸಲು ಬೇಡಿದನು. ಆಗ ಹರನಿಗೆ ಅಭಯವಿತ್ತ ಹರಿಯು ಜಗನ್ಮೋಹಿನಿಯಾದ ಸ್ತ್ರೀರೂಪ ಧರಿಸಿ ಅಸುರನ ಎದುರಿಗೆ ಬಂದಾಗ, ಅವನು ಅವಳಲ್ಲಿ ಮೋಹಿತನಾಗಿ ತನಗೆ ಸತಿಯಾಗಲು ಬೇಡಿದನು. ಆಗ ಲಜ್ಜೆಯನ್ನು ವ್ಯಕ್ತಪಡಿಸುತ್ತಾ ಮೋಹಿನಿಯ ಕಾಲ ಹೆಬ್ಬೆರಳು ಭೂಮಿಯನ್ನು ಕೆರೆಯುತ್ತದೆ. ಅಲ್ಲಿ ಗಂಗೆ ಉತ್ಪತ್ತಿಯಾಗಿ ಶ್ರೀಹರಿಯ ಪಾದತೀರ್ಥದ ಹೊಂಡವಾಗುತ್ತದೆ. ಅಸುರನು ತನ್ನ ಕಾಮತೃಷೆ ನಿವಾರಣೆಗಾಗಿ ಮೋಹಿನಿಯನ್ನು ಆಲಿಂಗಿಸಲು ಮುಂದಾಗುತ್ತಾನೆ. ಆಗ ಆತನನ್ನು ನಿವಾರಿಸಲು, ಅತಿ ಪ್ರೀತಿಯಿಂದ ಮೋಹಿನಿ ಹೇಳುತ್ತಾಳೆ, ಆತನು ಅನೇಕ ವರ್ಷಗಳು ಕಠಿಣ ತಪವನ್ನಾಚರಿಸಿರುವ ಕಾರಣ ಅವನ ತನುವು ಮಲಿನವಾಗಿರುವುದು, ಅದನ್ನು ಆಗ ತಾನೇ ಪಾದಜಲದಿಂದ ನಿರ್ಮಿತವಾದ ಕುಂಡದಲ್ಲಿ ಸ್ನಾನಮಾಡಿ ಪರಿಶುದ್ಧನಾಗಿ, ಸರ್ವಾಭರಣ ಭೂಷಿತನಾಗಿ, ಗಂಧಾದಿ ಸುಗಂಧ ದ್ರವ್ಯಗಳಿಂದ ಅಲಂಕೃತನಾಗಿ ಬಂದು, ತನ್ನ ಮನೋಭಿಲಾಷೆಯನ್ನು ಪೂರೈಸಿಕೊಳ್ಳಬಹುದೆಂದು ಸೂಚಿಸುತ್ತಾಳೆ. ಇದರಿಂದ ತೃಪ್ತನಾಗಿ ಸಂತಸ ಭರಿತನಾಗಿ ತ್ವರಿತಗತಿಯಿಂದ ಕುಂಡದಲ್ಲಿಳಿದು ಸ್ನಾನಮಾಡುತ್ತಿರುವಾಗ ತನ್ನ ಹಸ್ತವನ್ನು ತನ್ನ ತಲೆಯ ಮೇಲಿರಿಸಿಕೊಂಡು ಕೂದಲು ಸ್ವಚ್ಛಗೊಳಿಸಲು ಯತ್ನಿಸಿದ ಕೂಡಲೇ ಭಸ್ಮವಾಗಿ ಹೋಗುತ್ತಾನೆ. ದುಷ್ಟಶಿಕ್ಷಣವಾಗಿ ಶಿಷ್ಟರಕ್ಷಣವಾಯ್ತು.

ಈ ಹರಿಪಾದ ತೀರ್ಥಕ್ಕೆ ಗಜಕುಂಡವೆಂಬ ಹೆಸರಿದೆ. ಒಂಮಬಾರಿ ಇಲ್ಲಿ ವಿತ್ತಾಪತಿಮಿತ್ರ ಮತ್ತು ಪುಷ್ಪಕೇತು ಎಂಬ ಗಂಧರ್ವಪ್ರೇಮಿಗಳು ಈ ಶ್ವೇತಗಿರಿಯ ಸೊಬಗನ್ನು ಅನುಭವಿಸಿ ವಿಹರಿಸುತ್ತಾ ತನ್ಮಯರಾಗಿರುವಾಗ, ದೂರ್ವಾಸ ಮುನಿಗಳು ಬಂದುದರ ಅರಿವಾಗಲಿಲ್ಲ, ಅಂತೆ ಅವರನ್ನು ಆದರಿಸಲಾಗಲಿಲ್ಲ. ಕುಪಿತಗೊಂಡ ಮುನಿಯು ಅವರನ್ನು ಮದಗಜಗಳಾಗಿ ಎಂದು ಶಪಿಸಿದನು. ತಮ್ಮತಪ್ಪಿನ ಅರಿವಾದ ಆ ಗಂಧರ್ವಜೋಡಿ ತಮ್ಮ ಅಪರಾಧವನ್ನು ಕ್ಷಮಿಸಲು ಬೇಡುವರು. ಆಗ ಶಾಪಪರಿಹಾರ ಸೂಚಿತವಾಗುವುದು. ಮದಗಜಗಳಾಗಿ ಶ್ವೇತಾಚಲದಲ್ಲಿರುವ ಹರಿಶ್ರೀಪಾದ ತೀರ್ಥ ಕುಂಡದಲ್ಲಿ ವಿಹರಿಸುತ್ತಾ ಅದನ್ನು ದೊಡ್ಡದು ಮಾಡಬೇಕೆಂದೂ, ಒಂದಾನೊಂದುಕಾಲಕ್ಕೆ ವಸಿಷ್ಠಮಹರ್ಷಿಗಳು ಅಲ್ಲಿ ಗೈತಂದು ತಮ್ಮ ಸ್ನಾನ ಜಪತಪಗಳನ್ನು ಅಲ್ಲಿ ಆಚರಿಸುವರೆಂದೂ, ಆಗ ಅವರ ಅನುಷ್ಠಾನಗಳಿಗೆ ಆತಂಕಪಡಿಸುವ ಈ ಮದಗಜಗಳಿಗೆ ತಮ್ಮ ಕಮಂಡಲುವಿನಲ್ಲಿರುವ ತೀರ್ಥ ಎರಚಿ ನಿವಾರಿಸಿಕೊಳ್ಳುವರು. ಇವರಿಂದ ಪುನೀತರಾದ ಮದಗಜಗಳ ರೂಪ ಅಳಿದು ಶಾಪವಿಮೋಚನವಾಗಿ ನೀವು ಶ್ವೇತಾಚಲಾಧೀಶನನ್ನು ಸೇವಿಸಿ ಸ್ವಸ್ಥಾನವನ್ನು ಸೇರಬಹುದು ಎಂದು ದೂರ್ವಾಸಮುನಿಯು ಉಶ್ಶಾಪವನ್ನು ಕರುಣಿಸಿದರು. ಅದರಂತೆ ಮದಗಜಜೋಡಿ ಈ ಕುಂಡದಲ್ಲಿ ಪರಿಹಾರ ಪಡೆದುಕೊಂಡುದರಿಂದ ಇದಕ್ಕೆ ಗಜಕುಂಡವೆಂದೇ ಹೆಸರಾಯಿತು.

ಗಂಗಾನದಿಯಲ್ಲಿ ಪಾಪಿಗಳು ಪ್ರತಿದಿನವೂ ಸ್ನಾನಮಾಡಿ ತಮ್ಮ ಪಾಪಗಳನ್ನು ಕಳಚಿ ತನ್ನ ಮೇಲೆ ಹಾಕುತ್ತಿರುವುದರಿಂದ, ತಾನು ಆ ಎಲ್ಲ ಪಾಪಗಳ ಹೊರೆಯನ್ನು ನಿವಾರಿಸಿಕೊಳ್ಳಲೋಸುಗ, ಗಂಗೆಯು ಶ್ರೀಹರಿಯನ್ನು ಪ್ರಾರ್ಥಿಸುತ್ತಾಳೆ. ಆಗ ಪರಮಾತ್ಮನು ಶ್ವೇತಾದ್ರಿಯಲ್ಲಿ ತನ್ನ ಶ್ರೀಪಾದದಿಂದ ಉತ್ಪನ್ನವಾಗಿರುವ ಸರಸ್ಸು ಗಜಕುಂಡವೆಂದು ಪ್ರಸಿದ್ಧವಾಗಿರುವುದೆಂದೂ, ಅದರಲ್ಲಿ ಗಂಗೆಯು ವಾಸ್ತವ್ಯಮಾಡಿಕೊಂಡಿದ್ದರೆ ಪರಿಶುದ್ಧಳಾಗುವಳೆಂದು ಸೂಚಿಸಿದನು. ಆಗಿನಿಂದಲೂ ಗಂಗೆಯು ಗಜಕುಂಡದಲ್ಲಿ ವಾಸ್ತವ್ಯಮಾಡಿಕೊಂಡಿರುವುದರಿಂದ ತಾನು ಪರಿಶುದ್ಧಳಾಗುತ್ತಿದ್ದಾಳೆ, ಅಂತೆಯೇ ಈ ಗಜಕುಂಡಲ್ಲಿ ಸ್ನಾನಮಾಡಿದವರು ಗಂಗಾಸ್ನಾನಕ್ಕಿಂತ ಅಧಿಕ ಫಲ ಪಡೆಯುತ್ತಾರೆ. ಅದರಿಂದ ಇಂತಹ ಪುಣ್ಯಕ್ಷೇತ್ರವಾದ ಶ್ವೇತಾಚಲದಲ್ಲಿರುವ ಗಜಕುಂಡ ಮತ್ತು ಭಾರ್ಗವಿ ನದಿ ಸ್ನಾನಮಾಡಿ ಶ್ರೀ ಬಿಳಿಗಿರಿ ರಂಗಸ್ವಾಮಿಯವರನ್ನು ಸೇವಿಸುವುದರಿಂದ ಮಾನವರು ಪುನರ್ಜನ್ಮವಿಲ್ಲದ ಸದ್ಗತಿಯನ್ನು ಪಡೆಯುವರು.

# ಗುಣೋತ್ಕರ್ಷ

---ಸ್ವಾಮಿ ಪುರುಷೋತ್ತಮಾನಂದ.



**ಇತ್ತೀಚಿನ** ದಿನಗಳಲ್ಲಿ ಧರ್ಮವೆಂಬ ಪದವನ್ನು **ಹೇರಳವಾಗಿ** ಬಳಸಲಾಗುತ್ತಿದೆ. ದೇಶವು ಸುಭಿಕ್ಷವಾಗಿದ್ದು ಜನರಲ್ಲಿ ಶಾಂತಿ ಸುಖ ನೆಲಸುವಂತಾಗಲು ಧರ್ಮದ ಅನುಸರಣೆಯೇ ಮೂಲವೆಂದು ತಿಳಿಸಲು ಧರ್ಮವೆಂಬ ಪದವನ್ನು ಬಳಸಲಾಗುತ್ತಿದೆ; ದೇಶದಲ್ಲಿ ನಡೆಯುತ್ತಿರುವ ಎಲ್ಲ ಗಲಭೆ-ಗೊಂದಲಗಳಿಗೂ ಧರ್ಮವೇ ಕಾರಣ ಎಂದು ವಾದಿಸುವವರಿಂದಲೂ ಧರ್ಮವೆಂಬ ಪದವನ್ನು ಬಳಸಲಾಗುತ್ತಿದೆ. ಸಂಗತಿ ಹೀಗಿದ್ದರೂ, ಧರ್ಮವೆಂದರೆ ನಿಜಕ್ಕೂ ಏನದು ಎಂದು ತಿಳಿದವರೂ ಕಡಿಮೆ, ತಿಳಿಯಲು ಆಸಕ್ತಿಯುಳ್ಳವರೂ ಕಡಿಮೆ. ಧರ್ಮದ ಮರ್ಮವನ್ನೇ ಅರಿಯದಿದ್ದ ಮೇಲೆ ಇನ್ನದನ್ನು ಅವಲಂಬಿಸುವ, ಅನುಸರಿಸುವ ಮಾತೆಲ್ಲಿ? ಧರ್ಮವನ್ನು ಅವಲಂಬಿಸಿ ಆಚರಣೆಯಲ್ಲಿ ತಾರದಿರುವವರು ಅದರ ಕುರಿತಾಗಿ ಬಣ್ಣಿಸಿದರೆಷ್ಟು, ಬಿಟ್ಟರೆಷ್ಟು? ಧರ್ಮದ ವಿವರಗಳನ್ನು ಪುಸ್ತಕಗಳ ಮೂಲಕವೋ ಪ್ರವಚನಗಳ ಮೂಲಕವೋ ತಿಳಿದುಕೊಳ್ಳಬಹುದೆಂಬುದೇನೋ ಸರಿಯೆ. ಆದರೆ ಅದನ್ನು ದೈನಂದಿನ ಜೀವನದಲ್ಲಿ ಆಚರಣೆಗೆ ತಾರದಿದ್ದರೆ ಅದು ಕೇವಲ ಪುಸ್ತಕದ ಬದನೆಕಾಯಿಯಾಗಿ ಉಳಿಯುವುದೇ ನಿಜ. ಧರ್ಮದ ಮಹಿಮೆ - ಮಹತ್ತನ್ನು ಮಹಾಜನರು ಮನಗಾಣುವಂತಾಗಬೇಕಾದರೆ ಅದನ್ನು ಮೈಗೂಡಿಸಿಕೊಂಡ ಕೆಲವು ಮಹನೀಯರಾದರೂ ಅಲ್ಲಲ್ಲಿ ಕಾಣಸಿಗುವಂತಾಗಬೇಕು. ಧರ್ಮವು ಸಂತೆಕಟ್ಟೆಗಳಲ್ಲಿ ಕಾಣಬರುವ ಸರಕಲ್ಲ. ಅದು ಮಾನವನಲ್ಲಿ ಮೈದೋರಬಹುದಾದ ಮಹತ್ವಪೂರ್ಣ ವಸ್ತು. ಉದಾಹರಣೆಗೆ, ಸತ್ಯ ಹೇಳುವುದೊಂದು ಧರ್ಮ; ಅಹಿಂಸೆಯನ್ನಾಚರಿಸುವುದೊಂದು ಧರ್ಮ. ಈ ಸತ್ಯ - ಅಹಿಂಸೆಗಳೆಂಬ ಧರ್ಮವು ಸಂತೆಕಟ್ಟೆಗಳಲ್ಲಿ ಕಾಣಸಿಕ್ಕೀತೆ? ಹೋಗಲಿ, ಸರಕಾರದಂತಹ ಸಂಸ್ಥೆಗಳಲ್ಲಿ ದೊರಕೀತೆ? ಆದರೆ ಅದೇ ಸತ್ಯ-ಅಹಿಂಸೆಗಳೆಂಬ ಧರ್ಮವು - ಆಚರಿಸುವ ಮನುಷ್ಯರಿದ್ದರೆ - ಆಗ ಅದು ಸಂತೆ ಕಟ್ಟೆಗಳಲ್ಲೂ - ಕಾಣಸಿಕ್ಕೀತು, ಸರಕಾರದಂತಹ ಸಂಸ್ಥೆಗಳಲ್ಲೂ ದೊರಕೀತು.

'ಬಿಡೋ ನಿನ್ನ ಪುರಾಣವನ್ನ', 'ಇವನು ಕೇವಲ ಭಾಷಣ ಬಿಗಿಯುವುದಕ್ಕಾದಾನು', 'ಇವನದು ಪರೋಪದೇಶ ಪಾಂಡಿತ್ಯ' ಇತ್ಯಾದಿ ಉದ್ಗಾರಗಳನ್ನು ನಾವು ದಿನವೇಳಗಾದರೆ ಕೇಳುತ್ತಿರುತ್ತೇವೆ. ಹಾಗಾದರೆ, ಪುರಾಣಗಳ ಶ್ರೇಷ್ಠ ವಿಚಾರಗಳನ್ನು ಕುರಿತು ಹೇಳುವುದು ತಪ್ಪೆ? ಭಾಷಣ ಮಾಡುವುದರಿಂದ ಎಷ್ಟು ಜನ ಹೊಸ ಹೊಸ ವಿಷಯಗಳನ್ನು ತಿಳಿದುಕೊಳ್ಳುವಂತಾಗುವುದಿಲ್ಲ! ಪಾಂಡಿತ್ಯವನ್ನು ಗಳಿಸಿಕೊಂಡ ಮೇಲೆ ಪ್ರವಚನ ಮಾಡದಿದ್ದರೆ ಅಂಥ ಪಾಂಡಿತ್ಯದಿಂದ ಯಾರಿಗೇನು ಪ್ರಯೋಜನ? ಹೀಗಿದ್ದರೂ ಪುರಾಣ ಹೇಳುವವರ, ಭಾಷಣ ಮಾಡುವವರ, ಉಪನ್ಯಾಸ ನೀಡುವವರ ವಿಷಯವಾಗಿ ಈ ತಿರಸ್ಕಾರದ ಹಗುರಮಾತುಗಳೇಕೆ? ಇದಕ್ಕೆ ಕಾರಣವಿಲ್ಲದಿಲ್ಲ. ಅವರ ಮಾತುಗಳನ್ನು ಕೇಳಿ ಮೆಚ್ಚಿದ ಜನ ಅವರ ಜೀವನವನ್ನು ನೋಡಿದರು; ಅವರು ಮಾತನಾಡಿದ ವಿಷಯಕ್ಕೂ ಜೀವನದ ರೀತಿಗೂ ಏನಾದರೂ ಹೊಂದಾಣಿಕೆಯಿದೆಯೇ ಎಂಬುದನ್ನು ಗಮನಿಸಿದರು. ಇಲ್ಲ, ಅಲ್ಲಿ ಯಾವ ಸಂಬಂಧವೂ ಕಾಣಲಿಲ್ಲ! ಅವರು ಆಡಿದ ಮಾತುಗಳೇ ಬೇರೆ ಮತ್ತು ಜೀವನದ ಧಾಟಿಯೇ ಬೇರೆ! ಇದನ್ನೆಲ್ಲ ಕಂಡ ಜನ ಆಡಿಕೊಳ್ಳಲಾರಂಭಿಸಿದರು, 'ಪುರಾಣ ಹೇಳೋದಕ್ಕೆ, ಬದನೆಕಾಯಿ ತಿನ್ನೋದಕ್ಕೆ' ಎಂದು 'ಹೇಳುವುದು ಶಾಸ್ತ್ರ, ಹಾಕುವುದು ಗಾಳ' ಎಂಬ ಮಾತೂ ಬಹಳ ಜನಜನಿತವಾದುದೇ. 'Devil quotes Scriptures' ಎಂಬ ಮಾತು ಇಂಗ್ಲೀಷಿನಲ್ಲೂ ಇದೆ. ಅಂದಮೇಲೆ,

> ಶ್ರದ್ಧೆ ಎಂಬುದೊಂದು ಗುಣ. ತಿಳಿದವರು ಧರ್ಮವನ್ನು ಶ್ರದ್ಧೆಯಿಂದ ಆಚರಿಸುತ್ತ ಇತರರಿಗೆ ತಿಳಿಯ ಹೇಳಬೇಕು. ಸ್ವಂತದ ಉದಾಹರಣೆಯನ್ನು ಮುಂದಿಟ್ಟುಕೊಂಡು ನಡೆದು ತೋರಿಸಬೇಕು ಎಂಬುದು ಆಚಾರ್ಯರ ಅಭಿಪ್ರಾಯ. ಮಾನವನ ವ್ಯಷ್ಟಿ ಸಮಷ್ಟಿಯ ಅಭಿವೃದ್ಧಿಗೆ ಧರ್ಮಾಚರಣೆಯಿಂದಲೇ ರಾಜಮಾರ್ಗದ ಏರ್ಪಾಡು ಸಾಧ್ಯವೆಂಬುದನ್ನು ಸ್ವಾಮಿ ಪುರುಷೋತ್ತಮಾನಂದರು ವಿವರಿಸಿದ್ದಾರೆ.

'ಹೇಳುವುದೊಂದು, ಮಾಡುವುದು ಮತ್ತೊಂದು' ಎಂಬ ಈ ಅಂಶ ಜಗದಾದ್ಯಂತ ಕಂಡುಬರುವ ಸಾಮಾನ್ಯ ರೋಗವೇ ಎಂದಂತಾಯಿತು. ಸುಭಾಷಿತದ ನುಡಿಯೊಂದು ಹೀಗಿದೆ: "ಮಹಾತ್ಮರ ಮನಸ್ಸೂ ಒಂದು, ಮಾತೂ ಒಂದು, ಕೃತಿಯೂ ಒಂದು, ದುರಾತ್ಮರ ಮನಸ್ಸೇ ಒಂದು, ಮಾತೇ ಒಂದು, ಕೃತಿಯೇ ಮತ್ತೊಂದು' ಎಂದು.

ಶ್ರೀ ರಾಮಕೃಷ್ಣ ಪರಮಹಂಸರು ಶಾಸ್ತ್ರಾಚರಣೆಯ ಮಹತ್ವವನ್ನು ತಿಳಿಸಲು ಹೇಳಿದ ಮಾತೊಂದು ಮಾರ್ಮಿಕವಾಗಿದೆ. ರಣಹದ್ದು ಆಕಾಶದಲ್ಲಿ ಅತಿ ಎತ್ತರದಲ್ಲೇನೋ ಹಾರಾಡುತ್ತಿರುತ್ತದೆ. ಆದರೆ ಅದರ ಕಣ್ಣು ಮಾತ್ರ ಕೆಳಗೆ ನೆಲದಲ್ಲಿ ಬಿದ್ದಿರುವ ಪ್ರಾಣಿಯೊಂದರ ಹೆಣದ ಮೇಲಿರುತ್ತದೆ. ಹಾಗೆಯೇ, ಶಾಸ್ತ್ರವಾಕ್ಯಗಳನ್ನು ಆಚರಣೆಯಲ್ಲಿ ತಾರದ ಪಂಡಿತರು ಅತ್ಯುನ್ನತ ವಿಚಾರಗಳ ಸಂಬಂಧವಾಗಿ ಪ್ರವಚನಗಳನ್ನೇನೋ ಮಾಡುತ್ತಾರೆ. ಆದರೆ ಅವರ ಮನಸ್ಸು ಮಾತ್ರ ಕಾಮ - ಕಾಂಚನಗಳ ಕಡೆಗಿರುತ್ತದೆ.

ಆದ್ದರಿಂದ, ಧರ್ಮವು ಮನುಷ್ಯನ ದೈನಂದಿನ ಆಚರಣೆಯಲ್ಲಿ ಕಂಡುಬರುವಂತಾಗಬೇಕೆಂಬುದು ಉಪನಿಷತ್ಕಾಲದ ಋಷಿಗಳ ನಿಶ್ಚಿತ ನಿಲುವು. ಅವರು ತಮ್ಮ ಶಿಷ್ಯರಿಗೆ ಶಾಸ್ತ್ರಗಳೊಂದಿಗೆ ಬ್ರಹ್ಮವಿದ್ಯೆಯನ್ನೇ ಬೋಧಿಸಿದರು. ಧ್ಯಾನದ ವಿಧಾನವನ್ನು ಅರುಹಿ ತನ್ಮೂಲಕ ಬ್ರಹ್ಮಾನಂದವನ್ನು ಸವಿಯುವ ತಂತ್ರವನ್ನೂ ತಿಳಿಸಿದರು. ಆದರೆ, ಇದರಲ್ಲೆಲ್ಲ ಪಾರಂಗತರಾಗಿ ಆ ಶಿಷ್ಯರು ಮನೆಗಳಿಗೆ ಹಿಂದಿರುಗುವ ಸಂದರ್ಭದಲ್ಲಿ ಮಾತ್ರ ಅವರಿಗೆ ನೀಡಿದ ತಮ್ಮ ಕೊನೆಯ ಸಂದೇಶವೇನು? "ಸತ್ಯಂ ವದ, ಧರ್ಮಂ ಚರ, ಸ್ವಾಧ್ಯಾಯ - ಪ್ರವಚನಾಭ್ಯಾಂ ನ ಪ್ರಮದಿತವ್ಯಂ, ಮಾತೃದೇವೋ ಭವ, ಪಿತೃದೇವೋ ಭವ, ಆಚಾರ್ಯದೇವೋ ಭವ, ಅತಿಥಿದೇವೋ ಭವ" ಎಂದರೆ 'ಸತ್ಯವನ್ನು ನುಡಿ, ಧರ್ಮದಿಂದ ನಡೆ, ಅಧ್ಯಯನ - ಪ್ರವಚನ ಬಿಡದಿರು, ತಾಯಿಯನ್ನು ದೇವರಂತೆ ನೋಡಿಕೊ, ತಂದೆಯನ್ನು ದೇವರಂತೆ ನೋಡಿಕೊ, ಗುರುಗಳನ್ನು ದೇವರಂತೆ ನೋಡಿಕೊ, ಅತಿಥಿಗಳನ್ನು ದೇವರಂತೆ ನೋಡಿಕೊ' ಎಂದು. ಇಲ್ಲಿ "ನೀವೆಲ್ಲ ಸದಾ ಬ್ರಹ್ಮಭಾವದಲ್ಲೇ ಇರಿ" ಎಂದು ಉಪದೇಶಿಸದೆ ದೈನಂದಿನ ಜೀವನದಲ್ಲಿ ನಡೆದುಕೊಳ್ಳಬೇಕಾದ ನಯವನ್ನು ಬೋಧಿಸಲಾಗಿದೆ. ಇದಕ್ಕೆ ಕಾರಣವೇನು? ಏನೆಂದರೆ, ಕೇವಲ ಧ್ಯಾನಕಾಲದಲ್ಲಿ ಮಾತ್ರವೇ ದೈವೀಭಾವದಿಂದಿದ್ದರೆ ಸಾಲದು, ಜೀವನದ ಪ್ರತಿ ಮುಹೂರ್ತದಲ್ಲೂ ದೈವೀಭಾವದ ಪ್ರತಿಫಲವಾದ ದೈವೀಗುಣಗಳು ವ್ಯಕ್ತವಾಗುತ್ತಿರಬೇಕು. ಹೀಗಿದ್ದರೆ ಮಾತ್ರ ಪಾರಮಾರ್ಥಿಕ ಹಾಗೂ ವ್ಯಾವಹಾರಿಕ ಜೀವನಗಳ ನಡುವೆ ಸಮರಸತೆಯ ಸೇತುವೆ ಏರ್ಪಟ್ಟೀತು. ಇದು ಆರ್ಯ ಋಷಿಗಳ ಅಭಿಮತ.

ನಿಜ, ಮಾನವ - ಮಾನವರ ನಡುವೆ ಮಧುರ ಮಾನವೀಯ ಸಂಬಂಧವೊಂದು ಮೂಡಿಬರದಿದ್ದರೆ ಅಲ್ಲಿ ಧರ್ಮವೂ ಇರದು, ದೈವಿಕತೆಯೂ ಇರದು. ಆದರೆ ಸತ್ಯಸಂಗತಿಯೇನೆಂದರೆ, ಧಾರ್ಮಿಕ ಮೌಲ್ಯಗಳನ್ನು ಮೈಗೂಡಿಸಿಕೊಂಡು ನಮ್ಮೊಳಗೆ ದೈವೀಕತೆಯ ದೀಪ್ತಿಯನ್ನು ಬೆಳಗಿಸಿಕೊಳ್ಳುವ ಪ್ರಯತ್ನ ನಡೆಸಿದಾಗಲೇ ನಮ್ಮಲ್ಲಿ ನಿಜವಾದ ಮಾನವೀಯತೆ ಮೈದಾಳಲು ಸಾಧ್ಯ. ಏಕೆಂದರೆ, ಮಾನವೀಯತೆಗೂ ದೈವಿಕತೆಗೂ ಅನ್ಯೋನ್ಯ ಸಂಬಂಧವಿದೆ. ಮಾನವೀಯತೆಯನ್ನು ಬೆಳೆಸಿಕೊಳ್ಳದೆ ದೈವಿಕತೆಗೆ ಏರಲು ಸಾಧ್ಯವಿಲ್ಲ. ದೈವಿಕತೆಯ ಆಧಾರವಿಲ್ಲದೆ ಮಾನವೀಯತೆಗೆ ಅಸ್ತಿತ್ವವಿಲ್ಲ.

ಮಾನವೀಯತೆಯ ಅತ್ಯಂತ ಸುಂದರ ಹಾಗೂ ಉದಾತ್ತ ಕಲ್ಪನೆಯನ್ನು ನಾವು ಉಪನಿಷತ್ತಿನಲ್ಲಿ ಕಾಣುತ್ತೇವೆ. ಋಷಿಗಳು ತಮ್ಮ ಯುವಶಿಷ್ಯರಿಗೆ ಮಾಡಿದ 'ಮಾತೃದೇವೋ ಭವ, ಪಿತೃದೇವೋ ಭವ, ಆಚಾರ್ಯದೇವೋ ಭವ, ಅತಿಥಿದೇವೋ ಭವ' ಎಂಬ ಈ ಬೋಧನೆ ಏನನ್ನು ಸೂಚಿಸುತ್ತಿದೆ? ತಾಯಿ - ತಂದೆ - ಗುರು - ಅತಿಥಿಗಳನ್ನು ಕೇವಲ ಮನುಷ್ಯರಂತೆ ಕಾಣದೆ ಸಾಕ್ಷಾತ್ ದೇವರೆಂದೇ ಭಾವಿಸಿದಾಗ ಅಲ್ಲಿ ಮಾನವೀಯ ಸಂಬಂಧದ ಮಹೋನ್ನತ ಪರಿಸರವೊಂದು ಅರಳಿಬರುತ್ತದೆ ಎಂಬ ಸತ್ಯವನ್ನು ಅದು ಸೂಚಿಸುವುದಿಲ್ಲವೆ! ಎಲ್ಲರೂ ತಂತಮ್ಮ ತಾಯಂದಿರನ್ನು ದೇವರಾಗಿ ಕಂಡಾಗ ಇತರ ಸ್ತ್ರೀಯರನ್ನು ಪೂಜ್ಯಭಾವದಿಂದ ಕಾಣಲು ಸಾಧ್ಯವಾಗುತ್ತದೆ. ಏಕೆಂದರೆ ಇತರ ಸ್ತ್ರೀಯರು ತಮ್ಮ ಮಾನವ ಬಂಧುಗಳ ಮಾತೆಯರೇ ಅಲ್ಲವೇ? ಎಲ್ಲರೂ ತಂತಮ್ಮ ತಂದೆಯರನ್ನು ದೇವರಾಗಿ ಕಂಡಾಗ ಇತರ ಪುರುಷರನ್ನೂ ಪೂಜ್ಯಭಾವದಿಂದ ಕಾಣಲು ಸಾಧ್ಯವಾಗುತ್ತದೆ. ಏಕೆಂದರೆ ಇತರ ಪುರುಷರು ತಮ್ಮ ಮಾನವ ಬಂಧುಗಳ ತೀರ್ಥರೂಪರೇ ಅಲ್ಲವೆ? ಇದೇ ಮಾತು ಗುರುಗಳ, ಅತಿಥಿಗಳ ವಿಷಯಕ್ಕೂ ಅನ್ವಯಿಸುತ್ತದೆ. ಹೀಗೆ ಮಾನವೀಯ

ಸಂಬಂಧವನ್ನು ಮಧುರಗೊಳಿಸಬಲ್ಲ ಧರ್ಮವನ್ನು ಮಾನವರು ಏಕೆ ಅವಲಂಬಿಸಬಾರದು?

ಧರ್ಮವೆಂಬುದು ಅವತಾರಪುರುಷರ ಜೀವನದಲ್ಲಿ ಅರಳಿ ಬಂದ ಬಗೆಯನ್ನೊಮ್ಮೆ ಭಾವಿಸಬೇಕು. ಸತ್ಯ ದಯೆ ನ್ಯಾಯಪರತೆ ಪ್ರಾಮಾಣಿಕತೆ ನಿಸ್ವಾರ್ಥ ಪರೋಪಕಾರಬುದ್ಧಿಯೇ ಮೊದಲಾದ ದಿವ್ಯಗುಣಗಳು ಅವರ ಜೀವನದ ಉಸಿರಾಗಿದ್ದವು. ಇವೆಲ್ಲಕ್ಕಿಂತ ಮುಖ್ಯವಾಗಿ ಪ್ರೀತಿ ವಿಶ್ವಾಸವೆಂಬುದು ಅವರ ವ್ಯಕ್ತಿತ್ವದ ಜೀವಾಳವೇ ಆಗಿತ್ತು. ಅವರು ಇಂತಿಂಥ ದೈವೀ ಗುಣಗಳನ್ನು ತಮ್ಮ ಜೀವನದ ಮೂಲಕ ಜಗತ್ತಿನಲ್ಲೆಲ್ಲ ಪಸರಿಸಿದ್ದರಿಂದಲೇ ಇಂದು ಅವರನ್ನು ಅವತಾರಪುರುಷರೆಂದು, ಶಾಂತಿ ದೂತರೆಂದು, ಧರ್ಮಮೂರುತಿಗಳೆಂದು ಜನತೆ ಸ್ವೀಕರಿಸಿದೆ ಮತ್ತು ಆರಾಧಿಸುತ್ತಿದೆ. ಶ್ರೀರಾಮನಿಗೆ 'ವಿಗ್ರಹವಾನ್ ಧರ್ಮಃ' ಎಂದೇ ಕೀರ್ತಿ. ಶ್ರೀಕೃಷ್ಣನನ್ನು 'ಭಗವಾನ್ ಸ್ವಯಂ' ಎಂದೇ ತಿಳಿದು ಅರ್ಚಿಸಲಾಗುತ್ತಿದೆ. ಇವೆಲ್ಲ, ಅವರು ಧರ್ಮದ ಪ್ರತಿಯೊಂದು ಅಂಶವನ್ನೂ ಆಚರಣೆಯಲ್ಲಿ ತೋರಿಸಿದರ ಫಲವೇ ಹೊರತು ಕೇವಲ ವ್ಯಕ್ತಿಪೂಜೆಯ ಮಾತಲ್ಲ.

ಶ್ರೀರಾಮ ತನ್ನ ತಾಯ್ತಂದೆಯರಲ್ಲಿ ಗುರುಹಿರಿಯರಲ್ಲಿ ವಿಧೇಯತೆಯಿಂದ ನಡೆದುಕೊಂಡ ಪರಿ ಎಷ್ಟು ಚಂದ! ಅವನು ಸೋದರರೊಂದಿಗೆ ಆದರದಿಂದಲೂ ಸ್ನೇಹದಿಂದಲೂ ವರ್ತಿಸಿದ ಬಗ್ಗೆ ಎಷ್ಟು ಚಂದ! ಅವನು ಸಕಲ ಪ್ರಜೆಗಳ ಮೇಲೂ ಸಮಾನವಾಗಿ ಪ್ರೀತಿ ಹರಿಸಿದ ರೀತಿ ಅದೆಷ್ಟು ಚಂದ!

ಹಾಗೆಯೇ ಶ್ರೀಕೃಷ್ಣ ತನ್ನ ಭುವನಮೋಹಕ ವ್ಯಕ್ತಿತ್ವದ ಮೂಲಕ ಮಕ್ಕಳಿಂದ ಮುದುಕರವರೆಗೆ ಸಕಲರನ್ನೂ ರಂಜಿಸಿದ ರೀತಿ ಅದೆಷ್ಟು ರಮಣೀಯ! ಸ್ವತಃ ಚಕ್ರವರ್ತಿಯಾಗಿ ಮೆರೆಯಬಲ್ಲ ಮಹಿಮೆಯಿದ್ದರೂ ಸದಾ ಸಾಮಾನ್ಯರ ನಡುವೆ ಸಾಮಾನ್ಯವಾಗಿ ಇರುವಷ್ಟರಲ್ಲೇ ಸಮಾಧಾನಹೊಂದಿದ ಅವನ ಸರಳತೆ ಅದೆಷ್ಟು ರಮಣೀಯ! ಕಪಟಿಗಳಾದ ಕೌರವರು ಜಾರ-ಚೋರನೆಂದು ಹೀನಾಯವಾಗಿ ಹಳಿದರೂ ಅದನ್ನು ಅವನು ಹಸನ್ಮುಖದಿಂದ ಸಹಿಸಿಕೊಂಡ ಬಗೆ ಅದೆಷ್ಟು ರಮಣೀಯ!

ಶ್ರೀರಾಮನಾಗಲಿ ಶ್ರೀಕೃಷ್ಣನಾಗಲಿ ಧರ್ಮದ ಲಕ್ಷಣಗಳಾದ ಸದ್ಗುಣಗಳನ್ನು ಹೊಂದಿರುವುದು ಒಂದು ಮುಖ್ಯಾಂಶವಾದರೆ, ತಮಗೆ ಶರಣಾಗಿ ಬಂದವರಿಗೆ ಪರಮಾನಂದವನ್ನು ಕರುಣಿಸಿದ್ದು ಇನ್ನೊಂದು ಮುಖ್ಯಾಂಶ. ಇದಲ್ಲದೆ, ಧರ್ಮವನ್ನು ಧಿಕ್ಕರಿಸಿದವರ ದಮನ ಮಾಡಿದ್ದು, ಭ್ರಷ್ಟಾಚಾರದಲ್ಲಿ ತೊಡಗಿಸಿದವರನ್ನು ಬಗ್ಗುಬಡಿದದ್ದು, ಸಜ್ಜನರಿಗೆ ಸಂಕಟವೊಡ್ಡಿದ ದುಷ್ಟರನ್ನು ಧ್ವಂಸಗೈದದ್ದು -- ಇವೆಲ್ಲ ಅವತಾರಪುರುಷರ ಧರ್ಮಾಚರಣೆಯ ವಿನ್ಯಾಸದ ಅದ್ಭುತ ಅಂಶಗಳು. ಸಮಾಜದಲ್ಲಿ, ರಾಷ್ಟ್ರದಲ್ಲಿ ದುರ್ಜನರ ದುರಾಚಾರಿಗಳ ದುರ್ವ್ಯಸನಿಗಳ ಸಂಖ್ಯೆ ಒಂದು ಮಿತಿಯೊಳಗೆ ಇರುವುದಾದರೆ ನಾವು ಹೇಗೋ ಬದುಕು ಸಾಗಿಸಬಹುದು. ಆದರೆ ಅಂಥವರ ಸಂಖ್ಯೆ ಅಳತೆ ಮೀರಿದಾಗ ಅನರ್ಥಗಳ ಪರಂಪರೆಯೇ ನಡೆದು ನಾವಿರುವ ಪರಿಸರವೇ ಒಂದು ನರಕವಾಗಿ ಪರಿಣಮಿಸೀತು. ಆದ್ದರಿಂದ ಧರ್ಮರಕ್ಷಣಾ ಕಾರ್ಯದಲ್ಲಿ ದುಷ್ಟದಮನವೂ ಒಂದು ಅತ್ಯಾವಶ್ಯಕ ಕರ್ತವ್ಯವಾಗುತ್ತದೆ. ಇಲ್ಲಿ ಒಂದು ಪ್ರಶ್ನೆಯೇಳಬಹುದು. ಭಗವಂತ ಅವತಾರ ತಾಳದಿರುವ ಅವಧಿಯಲ್ಲಿ ದುಷ್ಟರ ದಮನ ಮಾಡುವವರು ಯಾರು ಎಂಬುದೇ ಆ ಪ್ರಶ್ನೆ. ಹಿಂದೆ ರಾಜರು, ಕ್ಷತ್ರಿಯರು ಆ ಕಾರ್ಯವನ್ನು ಮಾಡುತ್ತಿದ್ದರೆ ಇಂದು ಅದನ್ನು ಸರಕಾರವು ಸೈನಿಕರ, ಪೋಲೀಸರ, ನ್ಯಾಯಾಧೀಶರ ಮೂಲಕ ಮಾಡಬೇಕಾಗಿದೆ ಎಂಬುದೇ ಅದಕ್ಕೆ ಉತ್ತರ. ದುಷ್ಟರನ್ನು ವೈರಿಗಳನ್ನೂ ತಡೆಗಟ್ಟುವುದು ಹಿಂದೆ ಕ್ಷತ್ರಿಯರ ಧರ್ಮವಾಗಿದ್ದರೆ ಇಂದು ಆ ಕಾರ್ಯ ಸೈನಿಕರ ಪೋಲೀಸರ ನ್ಯಾಯಾಧೀಶರ ಧರ್ಮವಾಗಿದೆ. ಮನುಧರ್ಮಶಾಸ್ತ್ರದಲ್ಲಿ ಒಂದು ಮಾತು ಹೀಗಿದೆ :

'ದೇಶದಲ್ಲಿ ಅವಿವೇಕಿಗಳೂ ಅವಿಧೇಯರೂ ಅಧಿಕವಿರುವ ಸಂದರ್ಭದಲ್ಲಿ ಅವರನ್ನು ಸದಾ ಹದ್ದುಬಸ್ತಿನಲ್ಲಿಟ್ಟುಕೊಂಡು ರಾಜ್ಯಭಾರ ಮಾಡಬೇಕು' ಎಂದು. ನಿಜ, ದುಷ್ಟರೂ ದುರಾಚಾರಿಗಳೂ ಅಧಿಕವಾಗಿರುವ ದೇಶ ಸುಖ ಶಾಂತಿ ಸಮೃದ್ಧಿಯನ್ನು ಕಾಣಬಲ್ಲುದೇ? ಕೌರವರ ಪ್ರಾಬಲ್ಯ ಹೆಚ್ಚಾದಾಗ ದೇಶ ಎಂಥ ದುಸ್ಥಿತಿಗೆ ಗುರಿಯಾಯಿತೆಂಬ ಸಂಗತಿ ನಮಗೆ ತಿಳಿಯದಿರುವಂಥದೆ? ಧರ್ಮಸಂಸ್ಥಾಪನೆ ಯಾಗಬೇಕಾದರೆ ದುಷ್ಟರನ್ನು ದಮನಗೈಯುವುದೊಂದೇ ದಾರಿ ಎಂಬ ಸತ್ಯವನ್ನು ಶ್ರೀರಾಮ ಶ್ರೀಕೃಷ್ಣ ತೋರಿಸಿಕೊಡಲಿಲ್ಲವೇ ?

ಭಗವಾನ್ ಬುದ್ಧ ಅವತರಿಸಿ ಅಹಿಂಸೆಯ ಪರಮೋಚ್ಚ ಆವಶ್ಯಕತೆಯನ್ನು ಬೋಧಿಸಿದ; ಅಹಿಂಸೆಯೇ ಪರಮ ಧರ್ಮವೆಂದ. ಚೆನ್ನಾಗಿ ಆಲೋಚಿಸಿ ನೋಡಿದರೆ ಅಹಿಂಸೆಯೆಂಬುದು ಮಧುರವಾದ ದಯಾಗುಣವೇ ಸರಿ. ನಮಗೆ ಹಿಂಸೆಯಾದರೆ ನೋವು - ದುಃಖ ಉಂಟಾಗುವಂತೆಯೇ ಇತರರಿಗೆ ಹಿಂಸೆಯಾದಾಗಲೂ ನೋವು - ದುಃಖ ಉಂಟಾಗುತ್ತದೆ ಎಂಬ ಅರಿವಿನಿಂದ ಮೂಡುವ ಗುಣವೇ ಅಹಿಂಸೆ. ನಮ್ಮಿಂದ ಇತರರಿಗೆ ಯಾವುದೇ ಬಗೆಯಿಂದಲೂ ಹಿಂಸೆಯಾಗದಂತೆ ನೋಡಿಕೊಳ್ಳುವುದು ಒಂದು ವಿಚಾರವಾದರೆ ಇತರರಿಗೆ ಬಂದ ಕಷ್ಟನಷ್ಟಗಳಿಗೆ ಪರಿಹಾರ ನೀಡುವ ಕಾರ್ಯವು ಅಹಿಂಸಾಚಾರಣೆಯ ಪಾರಮ್ಯವೆನಿಸುತ್ತದೆ. ಆದ್ದರಿಂದಲೇ ಸ್ವಾಮಿ ವಿವೇಕಾನಂದರು 'ದೀನ ದೇವೋ ಭವ', 'ರೋಗಿ ದೇವೋ ಭವ', 'ಮೂರ್ಖ ದೇವೋ ಭವ' ಎಂಬ ನೂತನ ಆದರ್ಶವೊಂದನ್ನು ಆವಿಷ್ಕರಿಸಿ ಮನುಕುಲದ ಮುಂದಿಟ್ಟರು. ದೀನರಿಗೆ ದಾನ ಮಾಡುವುದರ ಮೂಲಕ, ಮೂರ್ಖರಿಗೆ (ಮೂರ್ಖ ಎಂದರೆ ದಡ್ಡ ಎಂದರ್ಥ) ವಿದ್ಯಾಭ್ಯಾಸ ನೀಡುವುದರ ಮೂಲಕ ಅವರನ್ನು ಶೋಚನೀಯ ಸ್ಥಿತಿಯಿಂದ ಪಾರುಗಾಣಿಸುವ ಪ್ರಯತ್ನದಲ್ಲಿ ಧರ್ಮದ ಪ್ರಧಾನ ಅಂಶಗಳಾದ ಅಹಿಂಸಾಗುಣ ದಯಾಗುಣಗಳು ಅಡಗಿವೆಯೆಂಬುದನ್ನು ಗುರುತಿಸಬೇಕು. ಏಸುಕ್ರಿಸ್ತನೂ ಕೂಡ 'ಎಡಕೆನ್ನೆಗೆ ಹೊಡೆದವನಿಗೆ ಬಲಗೆನ್ನೆ ತೋರಿಸು', 'ದೇವರಿಗೆ ನೈವೇದ್ಯ ನೀಡುವ ಮೊದಲು, ನೀನು ಯಾರೊಂದಿಗೆ ಜಗಳವಾಡಿದ್ದೀಯೋ ಅವರೊಂದಿಗೆ ರಾಜಿ ಮಾಡಿಕೊಂಡು ಬಂದು ಆ ಬಳಿಕ ನೈವೇದ್ಯ ನೀಡು' ಎಂದು ಬೋಧಿಸುತ್ತ, ಕುಷ್ಠರೋಗಿಗಳ ಆ ಭಯಂಕರ ವ್ಯಾಧಿಯನ್ನು ತನ್ನ ದಿವ್ಯಶಕ್ತಿಯಿಂದ ಗುಣಪಡಿಸುತ್ತ ಅಹಿಂಸೆಯ ಹಾಗೂ ದಯಾಗುಣದ ಮಹದಾದರ್ಶವನ್ನು ಜ್ವಲಂತಗೊಳಿಸಿದ್ದಾನೆ. 'ಕೂಲಿಯಾಳುಗಳ ಮೈಬೆವರು ಆರುವುದಕ್ಕೆ ಮುನ್ನವೇ ಅವರ ಮಜೂರಿಯನ್ನು ಅವರಿಗೆ ಕೊಟ್ಟುಬಿಡು' ಎಂಬ ಮಹಮ್ಮದ್ ಪೈಗಂಬರನ ಮಾತು ಅವನ ದಯಾಗುಣದ ಸ್ಪಷ್ಟ ಪ್ರತೀಕ. ಹೀಗೆ ಅವತಾರಪುರುಷರೂ ಪ್ರವಾದಿಗಳೂ ತಮ್ಮ ಉದಾತ್ತ ಜೀವನದ ಮೂಲಕವೇ ಧರ್ಮದ ವಿಭಿನ್ನ ಅಂಶಗಳನ್ನು ಆಚರಿಸಿ ತೋರಿಸಿದ್ದಾರೆ. ಇನ್ನು, ಅಸಂಖ್ಯಾತ ಸಾಧುಸಂತರು ಇಂದಿಗೂ ಜನಕೋಟಿಯ ಮನ್ನಣೆಗೆ ಪಾತ್ರರಾಗಿದ್ದರೆ ಅದಕ್ಕೆ ಅವರು ಆ ಜೀವ ಪರ್ಯಂತ ಧರ್ಮದ ಸಕಲ ಅಂಶಗಳನ್ನು ತಮ್ಮ ದಿನಚರಿಯಲ್ಲಿ ಅಳವಡಿಸಿಕೊಂಡು ಆಚರಿಸಿದ್ದೇ ಕಾರಣ.

ಆದರೆ ಸಾಧುಸಜ್ಜನರ ಸೌಜನ್ಯವನ್ನು ದುರುಪಯೋಗಪಡಿಸಿಕೊಂಡು ತಮ್ಮ ಸ್ವಾರ್ಥ ಸಾಧಿಸಿಕೊಳ್ಳಲು ಕುಟಿಲ ಜನರು ಎಂತೆಂಥ ಕುತಂತ್ರ ಹೂಡಿ ಯಾರೆಂಬುದನ್ನು ಹೇಳಬಲ್ಲವರಾರು ? ಅಂಥ ಸಂದರ್ಭದಲ್ಲಿ ಈ ಸಜ್ಜನರೇನು ಮಾಡಬೇಕು? 'ತಾಳುವಿಕೆಗಿಂತನ್ಯತಪವು ಇಲ್ಲ' ಎಂದುಕೊಂಡು ಕೈಕಟ್ಟಿ ಕುಳಿತಿರಬೇಕೆ? ಅಥವಾ ಆತ್ಮರಕ್ಷಣೆಯ ಹೆಸರಿನಲ್ಲಿ ಆ ದುರ್ಜನರನ್ನು ಘಾಸಿಗೊಳಿಸಬೇಕೆ? ಇಲ್ಲಿ ಶ್ರೀರಾಮಕೃಷ್ಣ ಪರಮಹಂಸರು ತಿಳಿಸಿಕೊಡುವ ವಿಧಾನ ತುಂಬ ಧರ್ಮ ಸಮ್ಮತವಾಗಿದೆ. ಅವರು ಹೇಳುತ್ತಾರೆ, ಕೈಕಟ್ಟಿಕೊಂಡು ಕುಳಿತಿರಲೂ

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದು ಉಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತಿವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಫಲಕ ವಿಡಲಾಗುವುದೆ ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/-

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿ ಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ  
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು,

ತಿರುಪತಿ -- 517 507.

ಬೇಡ, ಕಟ್ಟಲೂ ಹೋಗಬೇಡ. ಬದಲಾಗಿ, ಬುಸುಗುಟ್ಟು' ಎಂದು. ಎಷ್ಟು ಸೂಕ್ತವಾಗಿದೆ ಈ ಸಲಹೆ! ಧರ್ಮವನ್ನು ಆಚರಣೆಗೆ ತರುವುದೊಂದು ಬಲು ಸೂಕ್ಷ್ಮದ ಕೆಲಸ.

ಧರ್ಮವುಒಂದೇ ಎಂಬುದು ನಿಜ. ಆದರೆ ಅದು ಜೀವಿಗಳ ಜೀವನದಲ್ಲಿ ವ್ಯಕ್ತವಾಗಲು ತೊಡಗಿದಾಗ ವಿವಿಧ ರೂಪಗಳನ್ನು ತಳೆಯುತ್ತದೆ, ವಿಧವಿಧವಾಗಿ ಕಾಣಿಸಿಕೊಳ್ಳುತ್ತದೆ. ಉದಾಹರಣೆಗೆ ಸಮಸ್ತ ಜೀವಕೋಟಿಗಳನ್ನು ಸ್ಥೂಲವಾಗಿ ವಿಭಜಿಸಿದಾಗ ಈ ಜಗತ್ತಿನಲ್ಲಿ ನಾಲ್ಕು ಬಗೆಯ ಜೀವವರ್ಗಗಳನ್ನು ಗುರುತಿಸಬಹುದು - ಸಸ್ಯವರ್ಗ, ಪಕ್ಷಿವರ್ಗ, ಪ್ರಾಣಿವರ್ಗ ಹಾಗೂ ಮನುಷ್ಯವರ್ಗ, ಈ ಎಲ್ಲ ವರ್ಗಗಳಲ್ಲೂ ಹಲವಾರು ಪ್ರಕಾರಗಳೂ ನಮೂನೆಗಳೂ ಇವೆ. ಇವುಗಳನ್ನೆಲ್ಲ ವಿವರಿಸುವ ಅನೇಕಾನೇಕ ಗ್ರಂಥಗಳೂ ಹುಟ್ಟಿಕೊಂಡಿವೆ. ಈಗ, ಈ ಎಲ್ಲ ವರ್ಗಗಳ ಜೀವಿಗಳೂ ತಮ್ಮದೇ ಆದ ಸ್ವಭಾವದಿಂದ ವರ್ತಿಸುತ್ತವೆ. ಈ ಸ್ವಭಾವವನ್ನೇ ಆಯಾ ವರ್ಗದ ಧರ್ಮ, ಎಂದರೆ ಸಸ್ಯಧರ್ಮ, ಪಕ್ಷಿಧರ್ಮ, ಪ್ರಾಣಿಧರ್ಮ, ಮಾನವಧರ್ಮ ಎಂಬುದಾಗಿ ಕರೆಯಲಾಗಿದೆ. ಸಸ್ಯ ಪಕ್ಷಿ, ಪ್ರಾಣಿ -- ಈ ವರ್ಗಗಳ ಸ್ವಭಾವಗಳು ಪ್ರಕೃತಿಯ ಅಧೀನ. ಎಂದರೆ ಅವು ತಮ್ಮ ಸ್ವಭಾವಗಳಲ್ಲಿ ಬದಲಾವಣೆ ತಂದುಕೊಳ್ಳಲಾರವು. ಆದ್ದರಿಂದ ಅವು ಪ್ರಗತಿಹೊಂದುವುದು, ಉನ್ನತಿಗೇರುವುದು ಎಂಬ ಮಾತಿಲ್ಲ. ಆದರೆ ಮನುಷ್ಯವರ್ಗ ಹಾಗಲ್ಲ. ಮನುಷ್ಯ ಆಲೋಚಿಸಬಲ್ಲ. ಅವನು ಇದೊಂದು ವಿಶೇಷ ಸಾಮರ್ಥ್ಯ ಹೊಂದಿದ್ದಾನೆ. ಆದ್ದರಿಂದ ಅವನು ಬುದ್ಧಿಪೂರ್ವಕವಾಗಿ ತನ್ನ ಸ್ವಭಾವದಲ್ಲಿ ಪರಿವರ್ತನೆ ತಂದುಕೊಳ್ಳಬಲ್ಲ. ಪರಿಣಾಮವಾಗಿ ಅವನು ಅಧಮನಾಗುತ್ತಲೂ ಹೋಗಬಹುದು, ಉತ್ತಮನಾಗುತ್ತಲೂ ಬರಬಹುದು. ಈ ಬಗೆಯ ಪರಿವರ್ತನೆಗೆ ಅವನು ಬುದ್ಧಿಪೂರ್ವಕವಾಗಿ ಮಾಡುವ ದುಷ್ಕರ್ಮ ಅಥವಾ ಸತ್ಕರ್ಮವೇ ಕಾರಣ. ಮನುಷ್ಯ ದುಷ್ಕರ್ಮ ಮಾಡಲು ಅವನ ದುರ್ಬುದ್ಧಿ ಅಥವಾ ಅವನಿಗೆ ದೊರಕಿರುವ ದುಸ್ಸಹವಾಸ ಕಾರಣ. ಅವನು ಸತ್ಕರ್ಮ ಮಾಡಲು ಅವನ ಸದ್ಬುದ್ಧಿ ಅಥವಾ ಅವನಿಗೆ ದೊರಕಿರುವ ಸತ್ಸಹವಾಸ ಕಾರಣ. ದುಷ್ಕರ್ಮ ದುರಾಚಾರಗಳೇ ಅಧರ್ಮ ಹಾಗೂ ಸತ್ಕರ್ಮ ಸದಾಚಾರಗಳೇ ಸದ್ಧರ್ಮವೆಂದು ಸತ್ಪುರುಷರಿಂದ ತೀರ್ಮಾನವಾಗಿರುವುದರಿಂದ ಮನುಷ್ಯ ಸದಾ ಸತ್ಸಂಗದಲ್ಲಿರುತ್ತ ಸತ್ಕರ್ಮ ಸದಾಚಾರ ನಿರತನಾಗಿರಬೇಕು. ಈ ಮೂಲಕ ಅವನು ತನ್ನ ಮಾನವ ಸ್ವಭಾವಕ್ಕೂ ಮೇಲಾದ ದೈವೀಸ್ವಭಾವ ಹೊಂದುತ್ತಾನೆ. ತನ್ಮೂಲಕ ದೇವರೇ ಆಗುತ್ತಾನೆ. ಇದೇ ಧರ್ಮಾಚರಣೆಯಿಂದಾಗುವ ಮಹಾಪ್ರಯೋಜನ. ಹೀಗೆ ಮಾನವನನ್ನು ದೇವನನ್ನಾಗಿ ಬೆಳಗುವಂತೆ ಮಾಡಬಲ್ಲುದೇ ಧರ್ಮ. ಇಂಥ ಧರ್ಮದ ಮರ್ಮವನ್ನು ಮನಗಂಡು ಅನುಸರಿಸದಿದ್ದರೆ ಯಾರು ತಾನೇ ಉದ್ಧಾರವಾದಾರು?

## ಧರ್ಮದಲ್ಲಿ ದಯೆಯ ಹೆಚ್ಚುಗಾರಿಕೆ

'ದಯವಿಲ್ಲದಾ ಧರ್ಮ ಅದಾವುದಯ್ಯಾ' ಎಂಬ ಪ್ರಶ್ನೆಯನ್ನು ಮುಂದಿಡುತ್ತ ಧರ್ಮದಲ್ಲಿ ದಯೆಯ ಮಹತ್ವವನ್ನು ಮನಗಾಣಿಸಿದ್ದಾರೆ.

ವಿಶಾಲ ಅರ್ಥವ್ಯಾಪ್ತಿಯುಳ್ಳ ಈ ಧರ್ಮ ಕಾಣಸಿಗುವ ತಾಣಯಾವುದು? ಭೂಮಂಡಲವೆ ? ವಾಯುಮಂಡಲವೆ ? ಅಥವಾ ಗಗನಮಂಡಲವೆ ಇಲ್ಲ, ಎಲ್ಲಿಯೂ ಅದು ತನ್ನಷ್ಟಕ್ಕೇ ಕಾಣಸಿಗುವಂಥದಲ್ಲ. ಸತ್ಯಪರತೆ, ಕರುಣೆ, ನಿಸ್ವಾರ್ಥ, ಪ್ರಾಮಾಣಿಕತೆ, ಸಹಾನುಭೂತಿ, ಪರೋಪಕಾರ ಬುದ್ಧಿ - ಇವೆಲ್ಲ ಧರ್ಮದ ವಿವಿಧ ಮುಖಗಳು. ಇಂಥ ದಿವ್ಯ ಗುಣಗಳನ್ನು ಎಲ್ಲೆಂದರಲ್ಲಿ ಕಾಣಬಹುದೆ ? ಇವು ಕಾಣಸಿಗುವುದು ಮನುಷ್ಯನ ವ್ಯಕ್ತಿತ್ವದಲ್ಲಿ ಮಾತ್ರ. ಮಾನವರು ಈ ಧಾರ್ಮಿಕ ಗುಣಗಳನ್ನು ಅರಿತು ಅಳವಡಿಸಿಕೊಂಡು ಅನುಷ್ಠಾನಕ್ಕೆ ತಂದಾಗ ಅಲ್ಲಿ ಅವು ಬೆಳಗಲಾರಂಭಿಸುವುವು. ಆಗ ಅವನ್ನು ಇತರರು ಕಾಣಬಹುದು, ಕಂಡು ಆನಂದಿಸಬಹುದು. ದುರಾಚಾರಿಯಾದ ಧೂರ್ತನ ಮುಖವನ್ನೊಮ್ಮೆ ನೋಡಿದರೆ ಸಾಕು, ಅಲ್ಲಿ ಅಧರ್ಮದ ಕೊಳಕು ಸ್ಪಷ್ಟವಾಗಿ ಕಾಣಿಸುತ್ತದೆ. ಹಾಗೆಯೇ ಸದಾಚಾರ ಸಂಪನ್ನನಾದ ಸಜ್ಜನ ಮುಖವನ್ನೊಮ್ಮೆ ನೋಡಿದಾಗ ಅಲ್ಲಿ ಸುಧರ್ಮದ ಬೆಳಕು ಕಂಗೊಳಿಸುತ್ತಿರುತ್ತದೆ. ಆದ್ದರಿಂದಲೇ ಮನುಸ್ಮೃತಿ ಘೋಷಿಸಿತು :

ಆಚಾರಃ ಪರಮೋ ಧರ್ಮಃ
ಶ್ರುತ್ಯುಕ್ತಃ ಸ್ಮಾರ್ತ ಏವ ಚ
ತಸ್ಮಾದಸ್ಮಿನ್ ಸದಾ ಯುಕ್ತಃ
ನಿತ್ಯಂ ಸ್ಯಾದಾತ್ಮವಾನ್ ನರಃ

ಎಂದರೆ, ವೇದಗಳಲ್ಲಿ ಹಾಗೂ ಶಾಸ್ತ್ರಗಳಲ್ಲಿ ತಿಳಿಸಿಕೊಡಲಾದ ಸದಾಚಾರವೇ ಶ್ರೇಷ್ಠ ಧರ್ಮ. ಆದ್ದರಿಂದ ಧರ್ಮದ ಎಲ್ಲ ಅಂಶಗಳನ್ನೂ ನಿತ್ಯವೂ ಆಚರಣೆಗೆ ತಂದುಕೊಂಡು ಆತ್ಮಸಾಕ್ಷಾತ್ಕಾರವನ್ನು ಹೊಂದುವಂತಾಗಬೇಕು.

ಸಕಲ ಸದ್ಗುಣಗಳೇ ಧರ್ಮದ ತಿರುಳು. ಈ ಸದ್ಗುಣಗಳನ್ನು ಸರ್ವದಾ ಆಚರಣೆಯಲ್ಲಿಡುವುದೇ ಪರಮಧರ್ಮ.

ಯಾಜ್ಞವಲ್ಕ್ಯಸ್ಮೃತಿಯು ಸದಾಚಾರಕ್ಕೆ, ಉತ್ತಮ ನಡತೆಗೆ ಒತ್ತು ಕೊಡುತ್ತ ಹೇಳುತ್ತದೆ. "ಬರೀ ವಿದ್ಯೆಯಿಂದಾಗಲಿ, ತಪಸ್ಸಿನಿಂದಾಗಲಿ ಯಾರಿಗೂ ಪಾತ್ರತೆ ಬರುವುದಿಲ್ಲ. ಆದರೆ ಯಾರಲ್ಲಿ ವಿದ್ಯೆ ಮತ್ತು ತಪಸ್ಸಿನೊಂದಿಗೆ ಉತ್ತಮ ನಡತೆಯೂ ಸೇರಿಕೊಂಡಿದೆಯೋ ಅವನು ಮಾತ್ರವೇ ಸತ್ಪಾತ್ರ" ಎಂದು.

ಈಗ ಸದಾಚಾರವೇ ಧರ್ಮದ ಬೆನ್ನೆಲುಬು ಎಂಬುದೇನೋ ಸರಿಯೆ. ಆದರೆ ಮರುಕ್ಷಣಕ್ಕೆ ಆಚರಣೆಗೆ ತಂದುಕೊಳ್ಳಬೇಕಾದ ಸದ್ಗುಣಗಳು ಯಾವುವು ಎಂಬ ಪ್ರಶ್ನೆ ಉದಿಸದಿರಲಾರದು. ಸೌಜನ್ಯ, ಔದಾರ್ಯ, ಕರುಣೆ, ನಿಸ್ವಾರ್ಥ, ಪ್ರಾಮಾಣಿಕತೆ, ಪರೋಪಕಾರಬುದ್ಧಿ ಇವೇ ಮೊದಲಾದ ಸದ್ಗುಣಗಳ ಪಟ್ಟಿ ಬಹಳ ದೊಡ್ಡದೇ. ಸಕಲ ಸದ್ಗುಣಗಳನ್ನು ದೈವೀಗುಣಗಳೆಂದೂ ಎಲ್ಲ ದುರ್ಗುಣಗಳನ್ನು ರಾಕ್ಷಸೀ ಗುಣಗಳೆಂದೂ ಪರಿಗಣಿಸಲಾಗಿದೆ. ಈ ದೈವೀ ಗುಣಗಳ ಮೊತ್ತವೇ ಧರ್ಮ. ಮತ್ತು ರಾಕ್ಷಸೀಗುಣಗಳ ಸಮುದಾಯವೇ ಅಧರ್ಮ. ಭಗವದ್ಗೀತೆಯ 'ದೈವಾಸುರ ಸಂಪದ್ವಿಭಾಗಯೋಗ' ಎಂಬ ಅಧ್ಯಾಯದಲ್ಲಿ ಆ ಎರಡು ಬಗೆಯ ಗುಣಗಳ ರೂಪುರೇಷೆಯನ್ನು ನಮ್ಮ ಮುಂದಿಡಲಾಗಿದೆ.

ದೈವೀಗುಣಗಳಲ್ಲಿ ದಯೆಗೆ ಅಗ್ರಸ್ಥಾನ. ದಯೆ, ಕರುಣೆ, ಸಹಾನುಭೂತಿ, ಅನುಕಂಪೆ ಇವೆಲ್ಲ ಒಂದೇ ಅರ್ಥವನ್ನು ಕೊಡುವ ಪರ್ಯಾಯ ಪದಗಳು. ಈ ದಯೆಯ ಅಸ್ತಿತ್ವದಿಂದಲೇ ಸಕಲ ಸದ್ಗುಣಗಳಿಗೂ ಶೋಭೆ. ಆದ್ದರಿಂದಲೇ ಅದಕ್ಕೆ ಅಗ್ರಸ್ಥಾನ, ಸ್ವಯಂ ಪರಮಾತ್ಮನೂ ಕರುಣಾಮಯನಾದುದರಿಂದಲೇ ಈ ಮಾನವ ಲೋಕದಲ್ಲಿ ಅವನಿಗೆ ಮನ್ನಣೆ. ಅವನು ಸರ್ವಶಕ್ತನಿರಬಹುದು, ಸರ್ವವ್ಯಾಪಿಯಿರಬಹುದು, ಸರ್ವಜ್ಞನೂ ಇರಬಹುದು. ಆದರೆ ಅವನು ದಯಾಸಾಗರನಲ್ಲದಿದ್ದರೆ ಅವನನ್ನು ಮೂರ್ಲೋಕಗಳಲ್ಲೂ ಕೇಳುವವರು ಯಾರಿರುತ್ತಿದ್ದರು.

ಇಂತಹ ಭಗವಂತನನ್ನು ಧ್ಯಾನಿಸುವ ಮಾನವರಲ್ಲಿ ಅವನ ಗುಣಗಳೆಲ್ಲ ಪರಿದುಬರಲೇಬೇಕು. ಇದು ಅನಿವಾರ್ಯ ನಿಯಮ. 'ಯದ್ಭಾವಂ ತದ್ಭವತಿ' ಎಂಬ ಮಾತು ಬಹಳ ಪ್ರಸಿದ್ಧವಾದುದು. ಧರ್ಮಸ್ವರೂಪಿಯಾದ ಪರಮಾತ್ಮನ ಸ್ಮರಣ ಮನನ ಚಿಂತನ ಧ್ಯಾನ ಮಾಡುವವರಲ್ಲಿ ಅವನ ಕಲ್ಯಾಣಗುಣಗಳೆಲ್ಲ ಹರಿದುಬರುವಾಗ ದಯಾಗುಣವೂ ಬಾರದಿರುತ್ತದೆಯೇ? ಆದ್ದರಿಂದ

ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

ತಿರುಚಾನೂರು

## ಶುಕ್ರವಾರದ ಅಭಿಷೇಕ ಸೇವೆ

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಶುಕ್ರವಾರಗಳ ಅಭಿಷೇಕ ಸೇವೆಯನ್ನು ಯಾತ್ರಿಕರ ಸೌಲಭ್ಯದ ದೃಷ್ಟಿಯಿಂದ ಬೆಳಗ್ಗೆ 7 ಗಂಟೆಯಿಂದ 8 ಗಂಟೆಯವರೆಗೆ ನಡೆಸಬೇಕೆಂದು, ತಿ.ತಿ.ದೇ. ಪ್ರಾಧಿಕಾರ ನಿರ್ಣಯಿಸಿದೆ. ಹೀಗಾಗಿ ಅಂದಿನ ಕಾರ್ಯಕ್ರಮಗಳಲ್ಲಿ ಕಾಲಪರಿವರ್ತನೆಯಾಗಿದ್ದು, ಹೊಸದಾದ ಕಾರ್ಯಕ್ರಮ ಕಾಲ ಸೂಚಿಕೆಯನ್ನು ಇಲ್ಲಿ ನೀಡಲಾಗಿದೆ.

| | |
|---|---|
| ಬೆಳಗ್ಗೆ 5 ರಿಂದ 5.30 | ಸುಪ್ರಭಾತ. |
| ಬೆಳಗ್ಗೆ 5.30 ರಿಂದ 6.30 | ಸಹಸ್ರನಾಮಾರ್ಚನೆ.<br>ನಿತ್ಯ ಅರ್ಚನೆ.<br>ಮೊದಲನೇ ಗಂಟೆ. |
| ಬೆಳಗ್ಗೆ 6.30 ರಿಂದ 7.00 | ಸಡಲಿಂಪು. |
| ಬೆಳಗ್ಗೆ 7.00 ರಿಂದ 8.00 | **ಅಭಿಷೇಕ.** |
| ಬೆಳಗ್ಗೆ 8.00 ರಿಂದ 9.00 | ಮೂಲವರಿಗೆ ಅಲಂಕಾರ.<br>ಎರಡನೇ ಗಂಟೆ. |
| ಬೆಳಗ್ಗೆ 9 ರಿಂದ ರಾತ್ರಿ 8ವರೆಗೆ | **ಸರ್ವದರ್ಶನ.** |
| ಸಂಜೆ 6.00 ರಿಂದ ರಾತ್ರಿ 8.00 | ಮೆರವಣಿಗೆ.<br>ಊಂಜಲ್‌ಸೇವೆ. |
| ರಾತ್ರಿ 8.00 ರಿಂದ 8.30 | ರಾತ್ರಿ ಕೈಂಕರ್ಯ.<br>ರಾತ್ರಿ ಗಂಟೆ. |
| ರಾತ್ರಿ 8.30 ರಿಂದ 9.00 | **ಸರ್ವದರ್ಶನ.** |
| ರಾತ್ರಿ 9.00 | ಶುದ್ಧಿ, ಏಕಾಂತಸೇವೆ. |

ಸೂಚನೆ : ಗೃಹಸ್ಥರು ಬೆಳಗ್ಗೆ 7.00 ರಿಂದ 8.00 ವರೆಗೆ ನಡೆಯುವ ಅಭಿಷೇಕದಲ್ಲಿ ಪ್ರತಿಯೊಬ್ಬರಿಗೂ ರೂ. 100/- ಟಿಕೆಟ್ ಪಡೆದು ಪಾಲುಗೊಳ್ಳಬಹುದು.
ಅಭಿಷೇಕ ದರ್ಶನ ಶುಲ್ಕ ರೂ. 5/- ಪ್ರತಿಯೊಬ್ಬರಿಗೆ.

ಯಾತ್ರಿಕರು ಈ ಹೊಸ ಕಾರ್ಯಕ್ರಮಗಳಂತೆ
ಸೂಕ್ತ ಸಮಯದಲ್ಲಿ - ಸೇವೆಗಳಲ್ಲಿ - ಭಾಗವಹಿಸಲು ಕೋರಲಾಗಿದೆ.

**ತಿ. ತಿ. ದೇವಸ್ಥಾನಗಳು**
ತಿರುಪತಿ.



ಧಾರ್ಮಿಕವ್ಯಕ್ತಿಗಳಿಂದ ಮೇಲೆ ಅವರಲ್ಲಿ ದಯಾಗುಣವಿರಲೇಬೇಕೆಂದಾಯಿತು.

ಈಗ, ನಮ್ಮ ಸಹಮಾನವರ ಕಡೆಗೆ ಗಮನಹರಿಸಿ ನೋಡಿದಾಗ ಎಲ್ಲರೂ ಒಂದಲ್ಲ ಒಂದು ವಿಧದಿಂದ ಧರ್ಮಾವಲಂಬಿಗಳೇ ಆಗಿರುವುದು ಕಂಡು ಬರುತ್ತದೆ. ಆದರೆ ಎಲ್ಲರೂ ದಯಾವಂತರಾಗಿರುವರೆ? ಎಂಬ ಪ್ರಶ್ನೆಯನ್ನು ಹಾಕಿ ಪರೀಕ್ಷಿಸಿದಾಗ ಆಶಾದಾಯಕ ಉತ್ತರ ದೊರಕುವುದು ಸ್ವಲ್ಪ ಕಷ್ಟಸಾಧ್ಯವೇ! ಏಕೆಂದರೆ ಇಂದು - ಇಂದೇನು, ಹಿಂದಿನಿಂದಲೂ - ಧರ್ಮದ ಹೆಸರಿನಲ್ಲಿ ದೌರ್ಜನ್ಯದಿಂದ ಹಿಡಿದು ರಕ್ತಪಾತದ ವರೆಗಿನ ಕೃತ್ಯಗಳು ಸಂಭವಿಸಿರುವುದು, ಸಂಭವಿಸುತ್ತಿರುವುದು ದಿನದಿನಗಾದರೆ ನಮ್ಮ ಅನುಭವಕ್ಕೆ ಬರುತ್ತಿರುವ ಕಟುಸತ್ಯ! ಹೀಗೇಕೆ ಅವತಾರಪುರುಷರೂ 'ಅಹಿಂಸಾ ಪರಮೋ ಧರ್ಮಃ' ಎಂದೇ ಹೇಳಿ, 'ದಯೆಯಿಲ್ಲದಾ ಧರ್ಮ ಅದಾವುದಯ್ಯಾ' ಎಂಬ ಉದಾತ್ತ ವಾಕ್ಯಗಳನ್ನು ಜನ ಮಾತು ಮಾತಿಗೂ ಉದ್ಧರಿಸುವುದನ್ನು ಕಾಣುವಾಗ ಸಮಾಜದಲ್ಲಿ, ರಾಷ್ಟ್ರದಲ್ಲಿ, ಅಷ್ಟೇ ಅಲ್ಲ, ಸಮಸ್ತ ವಿಶ್ವದಲ್ಲಿ ದೌರ್ಜನ್ಯವೇಕೆ ಕಂಡುಬರಬೇಕು? ಉಪನಿಷತ್ತು ಇದಕ್ಕೆ ಕಾರಣವನ್ನು ಹೇಳುವ ರೀತಿ ತುಂಬ ಮಾರ್ಮಿಕವಾಗಿದೆ. ಅದು ಹೇಳುವುದು ಹೀಗೆ :

ಒಮ್ಮೆ ದೇವತೆಗಳು, ಮಾನವರು, ದಾನವರು ತಮ್ಮ ತಂದೆಯಾದ ಸೃಷ್ಟಿಕರ್ತ ಬ್ರಹ್ಮನ ಸಮಕ್ಷಮದಲ್ಲಿ ಬ್ರಹ್ಮಚರ್ಯ ವ್ರತಾಚಾರಣೆ ಮಾಡಿದರು. ಬಳಿಕ ದೇವತೆಗಳು ಸೃಷ್ಟಿಕರ್ತ ಬ್ರಹ್ಮನನ್ನು ಪ್ರಾರ್ಥಿಸಿಕೊಂಡರು. "ಭಗವನ್, ನಮಗೆ ಉಪದೇಶ ನೀಡು" ಎಂದು. ಸೃಷ್ಟಿಕರ್ತ ಬ್ರಹ್ಮ ಅವರಿಗೆ 'ದ' ಎಂಬ ಅಕ್ಷರವನ್ನು ಉಪದೇಶಿಸಿ, ಬಳಿಕ ಪ್ರಶ್ನಿಸಿದ: ದೇವತೆಗಳೇ, ನಿಮಗೆ ಈ ಅಕ್ಷರದ ಅರಿವಾಯಿತೆ? ದೇವತೆಗಳೆಂದರು : "ಹೌದು ಭಗವಾನ್, ಅರ್ಥವಾಯಿತು. ನೀನು 'ದ' ಎಂದು ಉಪದೇಶಿಸಿರುವುದರ ಮೂಲಕ ನಮಗೆ ನೀವು ದಾಂತರಾಗಿರಿ ಎಂದು ಉಪದೇಶಿಸಿದ್ದೀಯೆ ಅಲ್ಲವೆ?" ಇದಕ್ಕೆ ಸೃಷ್ಟಿಕರ್ತ ಬ್ರಹ್ಮನೆಂದ: "ಹೌದು, ನೀವು ಸರಿಯಾಗಿಯೇ ಅರಿತುಕೊಂಡಿದ್ದೀರಿ."

ಈಗ ಮಾನವರು ಅವನನ್ನು ಕೇಳಿದರು : "ಭಗವನ್, ನೀನು ನಮಗೆ ಉಪದೇಶ ನೀಡು" ಎಂದು. ಅವನು ಅವರಿಗೆ ಅದೇ 'ದ' ಎಂಬ ಅಕ್ಷರವನ್ನೇ ಉಪದೇಶಿಸಿ, ಹೇಳುತ್ತಾನೆ : "ಇದೇನೆಂದು ನೀವು ಅರಿತುಕೊಂಡಿರಾ?" ಮಾನವರೆಂದರು : "ಹೌದು ಭಗವನ್, ಅರಿತುಕೊಂಡೆವು. "ಓ ಮಾನವರೇ, ನೀವು ದಾನವಂತರಾಗಿರಿ" ಎಂದು ನೀನು ಹೇಳುತ್ತಿ

ರುವೆಯಲ್ಲವೆ ?" ಸೃಷ್ಟಿಕರ್ತನೆಂದ: "ಹೌದು, ನೀವು ಸರಿಯಾಗಿಯೇ ಅರಿತುಕೊಂಡಿರುವಿರಿ."

ಈಗ ದಾನವರು ಅವನ ಬಳಿ ಸಾರಿ ಹೇಳಿದರು : "ಭಗವನ್, ನೀನು ನಮಗೆ ಉಪದೇಶ ನೀಡು". ಅದಕ್ಕವನು ಪುನಃ 'ದ' ಎಂಬ ಅಕ್ಷರವನ್ನೇ ಉಪದೇಶಿಸಿ ಹೀಗೆಂದ : "ಇದೇನೆಂದು ನೀವು ಅರಿತುಕೊಂಡಿರಾ?" ದಾನವರೆಂದರು : "ಹೌದು ಭಗವನ್, ಅರ್ಥವಾಯಿತು. "ಓ ದಾನವರೇ, ನೀವು ದಯಾವಂತರಾಗಿರಿ" ಎಂದಲ್ಲವೇ ನೀನು ಉಪದೇಶಿಸಿದ್ದು?"

ಸೃಷ್ಟಿಕರ್ತನೆಂದ : "ಹೌದು ನೀವು ಸರಿಯಾಗಿಯೇ ಅರ್ಥಮಾಡಿಕೊಂಡಿರುವಿರಿ".

ನಾವು ಈ ಘಟನೆಯ ಮೇಲೆ ಚಿಂತನೆ ನಡೆಸಿದ್ದೇ ಆದರೆ ಇದು ಎಷ್ಟು ಅರ್ಥಪೂರ್ಣವಾಗಿದೆ ಎಂಬುದು ಅರಿವಿಗೆ ಬರುತ್ತದೆ. ಇಲ್ಲಿ ದೇವತೆಗಳೆಂದರೆ ಸ್ವರ್ಗಲೋಕದವರೆಂದೂ ದಾನವರೆಂದರೆ ಪಾತಾಳಲೋಕದವರೆಂದೂ ತಿಳಿಯಬೇಕಿಲ್ಲ. ಉತ್ತಮ ಗುಣಗಳಿಂದ ಕೂಡಿದ್ದರೂ ಇಂದ್ರಿಯ ವಿಲಾಸದಲ್ಲಿ ಮಗ್ನರಾಗಿರುವವರೇ ದೇವತೆಗಳು; ಅತಿಯಾದ ಜಿಪುಣ ತನವುಳ್ಳವರೇ ಮಾನವರು; ಹಿಂಸಾಪರರೂ, ಜಿಪುಣ ಕ್ರೂರಿಗಳೂ ಆಗಿರುವವರೇ ದಾನವರು. ಮನುಷ್ಯಲೋಕದಲ್ಲಿ ಇಂದ್ರಿಯವಿಲಾಸ, ಜಿಪುಣತನ ಹಾಗೂ ಕ್ರೌರ್ಯಗಳೆಂಬ ಮೂರು ಗುಣಗಳನ್ನು ಕಾಣುತ್ತೇವೆ. ಆದ್ದರಿಂದ ಇಂದ್ರಿಯವಿಲಾಸಿಗಳು 'ದಾಂತರಾಗಿರಬೇಕು' ಎಂದರೆ ಇಂದ್ರಿಯ ಸಂಯಮವುಳ್ಳವರಾಗಿರಬೇಕು; ಜಿಪುಣತನವುಳ್ಳವರು ದಾನಕಾರ್ಯಮಾಡುವುದರ ಮೂಲಕ ಆ ದೋಷದಿಂದ ದೂರವಾಗಬೇಕು; ಹಿಂಸಾಕೃತ್ಯವನ್ನೆಸಗುವ ಕ್ರೂರಬುದ್ಧಿಯವರು ದಯೆ ಎಂಬ ದೈವೀಗುಣವನ್ನು ಅಭ್ಯಸಿಸಬೇಕು ಎಂಬುದಾಗಿ ಸೃಷ್ಟಿಕರ್ತನ ಉಪದೇಶ.

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಬರುವ ಈ ಕಥೆಯ ಮೂಲಕ, ದಯಾಗುಣವನ್ನು ಎತ್ತಿಹಿಡಿದಿರುವ ಅಂಶವನ್ನು ನಾವಿಲ್ಲಿ ಗುರುತಿಸಬೇಕಾದ್ದು. ಮಾನವ ಸಮಾಜದಿಂದ ಈ ದಯಾಗುಣ ಮರೆಯಾಯಿತೆಂದರೆ ಎಲ್ಲೆಲ್ಲೂ ರಾಕ್ಷಸೀಕೃತ್ಯಗಳು ತಾಂಡವವಾಡುವುದು ಖಂಡಿತ. ಹುಲಿ, ಕರಡಿ ಸಿಂಹಗಳನ್ನು ಕ್ರೂರಪ್ರಾಣಿಗಳೆನ್ನುತ್ತೇವೆ ನಾವು. ಆದರೆ ಹೃದಯದಲ್ಲಿ ದಯಾರಸ ಬತ್ತಿಹೋಗಿ ಮನುಷ್ಯನೊಬ್ಬ ಕ್ರೂರಿಯಾದನೆಂದರೆ ಭಯಂಕರ ಕಾಡುಪ್ರಾಣಿಗಳೂ ಕಾಲಿಗೆ ಬುದ್ಧಿಹೇಳುವಂತಾದೀತು; ಮಾನವ ಸಮಾಜ ತತ್ತರಿಸೀತು.

ರಾಷ್ಟ್ರದಲ್ಲಿ ಅನ್ಯಾಯ ಅತ್ಯಾಚಾರ ಭ್ರಷ್ಟತೆಗಲು ಹೆಚ್ಚಿಕೊಂಡಿದ್ದರೆ ಅದೊಂದು ಪರ್ಯಾರಹಿತ ಕ್ರೌರ್ಯದ ಸ್ಥಿತಿಯೆಂದೇ ತಿಳಿಯಬೇಕಾಗುತ್ತದೆ. ರಾವಣ ಹಿರಣ್ಯಕಶಿಪು ಕೌರವಾದಿಗಳು ಅಂದು ಉಂಟುಮಾಡಿದ್ದು ಇಂಥ ವಾತಾವರಣವನ್ನೇ ಅಲ್ಲವೇ? ಇಂದು ನಮ್ಮ ಸಮಾಜದ ಹಾಗೂ ರಾಷ್ಟ್ರದ ಜನಜೀವನವನ್ನು ಪರೀಕ್ಷಿಸಿದ್ದೇ ಆದರೆ ಅಲ್ಲಿ, ಸುಸಂಸ್ಕೃತ ಸಮಾಜದಲ್ಲಿ ಕಾಣಸಿಗಬಹುದಾದ ಶಾಂತಿ ಸೌಖ್ಯ ಭದ್ರತೆ ಆನಂದ ಎಲ್ಲಿದೆ? ಬಡವರದ್ದು ಒಂದು ಬಗೆಯ ಗೋಳಿನ ಕಥೆಯಾದರೆ ಶ್ರೀಮಂತರದು ಮತ್ತೊಂದು ಬಗೆಯ ಚಿಂತೆಯ ಕಥೆ. ಕಾರ್ಮಿಕರ ಕಷ್ಟಗಳು ಒಂದು ತೆರನಾದರೆ ಮಾಲಿಕರದು ಮತ್ತೊಂದು ತರಹ.

ಪರಿಸ್ಥಿತಿ ಹೀಗಿದ್ದರೂ ನಮ್ಮ ಮಾನವ ಸಮಾಜ ಎಲ್ಲ ಬಗೆಯ ಕಷ್ಟ ಸುಖಗಳ ನಡುವೆಯೂ ಬದುಕು ನಡೆಸಲು ಸಾಧ್ಯವಾಗುತ್ತಿದೆ! ಅಷ್ಟೇ ಅಲ್ಲ, ಪ್ರಜಾವರ್ಗವೆಂಬುದು ಸಮೃದ್ಧಿಯಾಗಿ ಬೆಳೆಯಲೂ ಸಾಧ್ಯವಾಗುತ್ತಿದೆ! ಅಷ್ಟೇ ಅಲ್ಲ, ಹಿಂದೆ ಎಂತೆಂಥ ಸಿರಿವಂತರೂ ಕಂಡರಿಯದ ಭಕ್ಷ್ಯಭೋಜ್ಯಗಳು ಇಂದು ಸಾಮಾನ್ಯರಿಗೂ ಲಭ್ಯವಿದೆ. ಕಣ್ಮನ ಸೆಳೆಯುವ ಉಡಿಗೆ - ತೊಡಿಗೆಗಳು ಜನರ ಮೈಯನ್ನು ಅಲಂಕರಿಸುತ್ತಿವೆ. ಮಾತ್ರವಲ್ಲ, ಹಿಂದೆ, ಕಾಶೀಯಾತ್ರೆ ಮಾಡಬೇಕೆಂಬುವರು ತಂತಮ್ಮ ವೈಕುಂಠಸಮಾರಾಧನೆ ಮಾಡಿಕೊಂಡೇ ಹೊರಡಬೇಕಾಗಿದ್ದರೆ ಇಂದು ಕೈಯಲ್ಲಿ ನಾಲ್ಕು ಕಾಸಿರುವವರು ಇಡೀ ವಿಶ್ವದಲ್ಲಿ ಮನಬಂದೆಡೆ ಹೋಗಿ ಹಿಂದಿರುಗಿಬರಲು ಸಾಧ್ಯವಾಗುತ್ತಿದೆ! ಒಟ್ಟಿನಲ್ಲಿ ಹಿಂದೆ ರಾಜಮಹಾರಾಜರುಗಳಿಗೂ ಪ್ರಾಪ್ತಿಯಿಲ್ಲದಿದ್ದ ಭೋಗಭಾಗ್ಯಗಳನ್ನು ಇಂದು ಸಾಮಾನ್ಯ ಪ್ರಜೆಗಳೂ ಸವಿಯಲು ಸಾಧ್ಯವಾಗಿದೆ. ಇಂತಹ ಅಸಂಖ್ಯ ಸೌಕರ್ಯಗಳನ್ನು ಗಮನಿಸಿದಾಗ, ಇವುಗಳನ್ನೆಲ್ಲ ಕಂಡು - ಹುಡುಕಿ ಒದಗಿಸಿಕೊಟ್ಟವರ ಹೃದಯದಲ್ಲಿ ದಯಾಗುಣವಿದ್ದುದರಿಂದಲೇ ಸಾಧ್ಯವಾಯಿತು ಎಂದು ತಿಳಿಯಬಹುದಲ್ಲವೆ?

## ಧರ್ಮಾಚರಣೆಯು ಕೆಲವು ವಿಶಿಷ್ಟ ವರ್ಗಕ್ಕೆ ಮೀಸಲೆ?

ಧರ್ಮವೆಂದರೆ ಏನು ಎಂಬುದನ್ನು ತಿಳಿದ ಮೇಲೆ ಅದನ್ನು ಆಚರಿಸಬೇಕಾದವರು ಯಾರು ಎಂಬ ಪ್ರಶ್ನೆಯೇಳಬೇಕಾಗಿಯೇ ಇಲ್ಲ! ಆದರೂ ಹೆಚ್ಚಿನ ಜನ ತಿಳಿದಿರುವಂತೆ ಧರ್ಮಾಚರಣೆಯೆಲ್ಲ ಸಂನ್ಯಾಸಿಗಳಿಗೆ, ಪುರೋಹಿತರಿಗೆ, ಪಂಡಿತರಿಗೆ ಸೇರಿದ್ದು! 'ನಮ್ಮಂಥ ಲೌಕಿಕರೆಲ್ಲ ಧರ್ಮಾಚರಣೆ ಮಾಡುತ್ತ ಕುಳಿತಿರಲು ಸಾಧ್ಯವೇ?' ಎಂಬ ಭಾವನೆ ಜನಮನದಲ್ಲಿ ವ್ಯಾಪಕವಾಗಿ ಹರಡಿಕೊಂಡಿರುವುದು ಕಂಡುಬರುತ್ತದೆ. ಆದರೆ ಧರ್ಮವೆಂದರೆ ಕೇವಲ ಜಪ-ತಪವೂ ಅಲ್ಲ, ಕೇವಲ ದೇವಸ್ಥಾನಗಳಿಗೆ ಹೋಗಿಬರುವುದೂ ಅಲ್ಲ. ಕೇವಲ ಹಬ್ಬಹರಿದಿನಗಳನ್ನಾಚರಿಸುವುದೂ ಅಲ್ಲ, ಕೇವಲ ಹವನ ಹೋಮ ಮಾಡುವುದೂ ಅಲ್ಲ, ಕೇವಲ ತಿಲಕ - ನಾಮ ಧರಿಸುವುದೂ ಅಲ್ಲ. ಇವೆಲ್ಲ ಕೇವಲ ಬಾಹ್ಯಾಚರಣೆ. ಆದರೆ ಈ ಬಾಹ್ಯಾಚರಣೆಗಳನ್ನೇ ಭಾವಪೂರ್ಣವಾಗಿ ಅರ್ಥವತ್ತಾಗಿ ಮಾಡುತ್ತ ಮಾನವ - ಮಾನವರಲ್ಲಿ ಪ್ರೇಮ - ಸೌಹಾರ್ದ - ಸೋದರತೆ ಬೆಳೆಯುವಂತಾದಾಗ ಅದು ಸಾರ್ಥಕ ಧರ್ಮಾಚರಣೆಯೆನಿಸುತ್ತದೆ. ಈ ಬಗೆಯ ಧರ್ಮಾಚರಣೆಯು ಜನರ ವ್ಯಕ್ತಿತ್ವದ ಮೇಲೆ ಸತ್ಪರಿಣಾಮ ಬೀರಬಲ್ಲದು, ಅವರನ್ನು ಸಭ್ಯರನ್ನಾಗಿಯೂ ಸತ್ವಶಾಲಿಗಳನ್ನಾಗಿಯೂ ಮಾಡಬಲ್ಲದು.

ಧರ್ಮದ ಆಚರಣೆಯಲ್ಲಿ ಕರ್ತವ್ಯಗಳ ಪರಿಪಾಲನೆಯೊಂದು ಬಹು ಮಹತ್ವದ ಅಂಶ ಎಂಬುದನ್ನು ಜನಸಾಮಾನ್ಯರ ಮನದಲ್ಲಿ ಅಚ್ಚೊತ್ತುವ ಕಾರ್ಯ ಮಾಡಬೇಕಾಗಿದೆ.

ಯಾವುದೇ ಮೋಸವಿಲ್ಲದೆ ವ್ಯಾಪಾರ ಮಾಡಿದರೆ ಅದು ವರ್ತಕನ ಧರ್ಮಾಚರಣೆ. ಹೀಗೆಯೇ ಇಂಜಿನಿಯರು, ಡಾಕ್ಟರು, ಶಿಕ್ಷಕರು, ನೌಕರರು, ಮಂತ್ರಿಗಳು ಇವರೇ ಮೊದಲಾದ ಸಮಸ್ತ ಪ್ರಜೆಗಳು ತಮ್ಮ ಪಾಲಿನ ಕರ್ತವ್ಯಗಳನ್ನು ಜನಹಿತದೃಷ್ಟಿಯಿಂದ ಸೇವಾಮನೋಭಾವದಿಂದ ಮಾಡುವುದೇ ಧರ್ಮಾಚರಣೆ.

ಸ್ವಾರಸ್ಯಕರ ಸಂಗತಿಯೆಂದರೆ, ಈ ವಿಚಾರಗಳೆಲ್ಲ ಇಂದಿನ ವಿದ್ಯಾವಂತವರ್ಗಕ್ಕೆ ತಿಳಿದಿಲ್ಲವೆಂದಲ್ಲ. ಆದರೆ ಆಚರಿಸುವವರು ಮಾತ್ರ ಕಾಣಸಿಗುತ್ತಿಲ್ಲ! ತಿಳಿದವರೂ ಧರ್ಮಾಚರಣೆಯಲ್ಲಿ ಪ್ರವೃತ್ತರಾಗದಿರುವುದನ್ನು ಅಥವಾ ಆಷಾಢಭೂತಿಗಳಾಗಿರುವುದನ್ನು ಕಂಡ ಜನಸಾಮಾನ್ಯರು ಧರ್ಮದ ಬಗ್ಗೆ, ಅದರ ಆಚರಣೆಯ ಬಗ್ಗೆ ನಂಬಿಕೆಯನ್ನು ಕಳೆದುಕೊಂಡಿದ್ದಾರೆ. ಈ ಸ್ಥಿತಿಯಿಂದ ಪಾರಾಗಬೇಕಾದರೆ ಕೆಲವರಾದರೂ ನಿಷ್ಠಾವಂತರು ಧರ್ಮಾಚರಣೆಯಿಂದ ಪುಷ್ಟಿಗೊಂಡು ತಮ್ಮ ತೇಜೋವಂತ ವ್ಯಕ್ತಿತ್ವದ ಮೂಲಕವೇ ಧರ್ಮಾವಲಂಬನೆಯ ಆವಶ್ಯಕತೆಯನ್ನು, ಅದರ ಹೆಚ್ಚುಗಾರಿಕೆಯನ್ನು ತೋರಿಸಿಕೊಡಬೇಕು!

★☆★

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಸೆಪ್ಟಂಬರ್ 1995

1995 ರ ಸೆಪ್ಟಂಬರ್ ತಿಂಗಳಿನಲ್ಲಿ ತಿರುಮಲೆಯಲ್ಲಿ ಬ್ರಹ್ಮೋತ್ಸವಗಳು ನಡೆಯುತ್ತವೆ. ಈ ಬಾರಿ ಸೆಪ್ಟಂಬರ್ ಕಡೆಯ ವಾರ ಹಾಗೂ ಅಕ್ಟೋಬರ್ ಮೊದಲವಾರದಲ್ಲಿ ನಡೆಯುವ ಈ ಹತ್ತು ದಿನಗಳ ಉತ್ಸವದ ನೆನಪಿನಲ್ಲಿ ಒಂದು ಬ್ರಹ್ಮೋತ್ಸವ ಸಂಚಿಕೆಯನ್ನು ಹೊರತರಲು ಯೋಜಿಸಲಾಗಿದೆ.

ಹದಿನಾರು ಪುಟಗಳ ಮಧ್ಯವಿಸ್ತೃತಿಯ ವರ್ಣಚಿತ್ರಗಳನ್ನೂ ಒಳಗೊಳ್ಳುವ ಈ ಸಂಚಿಕೆಯಲ್ಲಿನ ಎಲ್ಲ ಲೇಖನಗಳೂ ತಿರುಮಲೆಯ ಶ್ರೀನಿವಾಸನನ್ನೇ ಕುರಿತು ಆಗಿರುವುವು. ಕೆಲವು ಮುಖ್ಯ ಲೇಖನಗಳೆಂದರೆ--

**ತಿರುಮಲೆಯಲ್ಲಿ ಶ್ರೀಕೃಷ್ಣದೇವರಾಯ:**

ಕನ್ನಡ ರಾಜ್ಯ ರಮಾರಮಣನೂ, ಕರ್ನಾಟಕಾಂಧ್ರ ಭೋಜನೂ ಆಗಿ ಕೀರ್ತಿಪಡೆದ ಯೋಧ, ಕವಿ ಶ್ರೀಕೃಷ್ಣದೇವರಾಯ ತಿರುಮಲೆಯ ಒಡೆಯನ ಭಕ್ತ. ಆತ ತಿರುಮಲೆಗೆ ಹಲವಾರು ಬಾರಿ ಬಂದಿದ್ದು ವಿವಿಧ ರೀತಿಯ ಸೇವೆಗಳನ್ನು ಸ್ವಾಮಿಗೆ ಸಲ್ಲಿಸಿದ. ದಿ|| ಎಸ್. ಅನಂತರಂಗಾ ಚಾರ್ಯ ಆಳವಾದ ಪರಿಶೋಧನ ಲೇಖನ.

**ತಿರುಮಲೆಯಲ್ಲಿ ಅಚ್ಯುತರಾಯ :**

ವಿಜಯನಗರ ಸಾಮ್ರಾಟರಲ್ಲಿ ಶ್ರೀಕೃಷ್ಣದೇವರಾಯನ ನಂತರ ಬಂದ ಸಾಮ್ರಾಟ. ತಿರುಮಲೆಯಪ್ಪನಲ್ಲಿ ಅತ್ಯಂತ ಭಕ್ತಿ ಭಾವದಿಂದ ನಡೆದುಕೊಂಡ ಸಾಮ್ರಾಟ. ಅವನು ಸ್ವಾಮಿಗೆ ಸಲ್ಲಿಸಿದ ಸೇವಾ ವಿವರವನ್ನು ಶಾಸನಾಧಾರದಲ್ಲಿ ಬೆಳಕಿಗೆ ತಂದವರು ದಿ|| ಸಾಧು ಸುಬ್ರಹ್ಮಣ್ಯಶಾಸ್ತ್ರಿ

**ತಿರುಮಲೆಯ ಆಲಯದ ವಿಗ್ರಹಗಳು :**

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಗರ್ಭಗುಡಿಯಲ್ಲಿ ಸ್ವಾಮಿಯ ಜೊತೆಗೇ ಮತ್ತೂ ಅನೇಕ ವಿಗ್ರಹಗಳಿವೆ. ಅವುಗಳ ಪರಿಚಯವನ್ನೂ ಇತಿಹಾಸವನ್ನೂ ಒದಗಿಸಿದ್ದಾರೆ ದಿ|| ಎಸ್. ರಮೇಶನ್.

**ಬ್ರಹ್ಮೋತ್ಸವ ಬೆಳೆದು ಬಂದ ರೀತಿ :**

ಪ್ರಾಚೀನ ಕಾಲದಿಂದಲೂ ತಿರುಮಲೆಯಲ್ಲಿ ನಡೆಯುವ ಉತ್ಸವವನ್ನು ಐತಿಹಾಸಿಕ ದೃಷ್ಟಿಕೋನದಿಂದ ಗಮನಿಸಿ - ಅದರ ಬೆಳವಣಿಗೆ ಯನ್ನು ದಾಖಲುಗೊಳಿಸಿದ್ದಾರೆ ದಿ|| ಟಿ. ಕೆ. ಟಿ. ವೀರರಾಘವಾಚಾರ್ಯರು.

**ಮಟ್ಲ ಕುಮಾರ ಅನಂತರಾಯ :**

ರಾಯಚೋಟಿಯ ಮಾಂಡಳಿಕನಾದ ಈತ ತಿರುಪತಿಗೆ ಮಾಡಿದ ಸೇವೆ ಅಮೂಲ್ಯವಾದದ್ದು. ಅದರ ವಿವರಗಳನ್ನು ಒದಗಿಸುವವರು ಶ್ರೀ ಪಿ. ಕೃಷ್ಣಮೂರ್ತಿ.

**ಹರಿದಾಸರು ಕಂಡ ಬ್ರಹ್ಮೋತ್ಸವ :**

ಕರ್ನಾಟಕ ಹರಿದಾಸರಿಗೆ ತಿರುಪತಿ ತಿಮ್ಮಪ್ಪನೆಂದರೆ ಅತ್ಯಂತ ಪ್ರೀತಿ ಭಕ್ತಿ. ಅವರಿಗೆ ಅವನ ದರ್ಶನ ಮಾಡಿ ತೃಪ್ತಿಯಿಲ್ಲ. ಅವನ ಹಾಡಿ ಹೊಗಳಿ ತೃಪ್ತಿಯಿಲ್ಲ. ಅವರು ದರ್ಶಿಸಿದ ಬ್ರಹ್ಮೋತ್ಸವ ವೈಭವವನ್ನು ಅವರ ಕೃತಿಗಳು ಕೀರ್ತಿಸಿವೆ. ಅದರ ವಿವರ ನೀಡುವವರು ಶ್ರೀಮತಿ ಎಸ್. ವಿ. ಹೇಮಾವತಿ.

ಜೊತೆಗೇ ಮತ್ತು ಹಲವಾರು ವಿವರಗಳು, ಚುಟುಕಗಳು, ಎಲ್ಲ ತಿರುಮಲೆಗೆ ಸಂಬಂಧಿಸಿದುವೆ. ತಮ್ಮ ಪ್ರತಿಯನ್ನು ಕಾಯ್ದಿರಿಸಿ.

# ತಿಂಗಳಿನ ಮುಖ್ಯದಿನಗಳು

## ಆಗಸ್ಟ್ --- 1995

| | | |
|---|---|---|
| 8-9-95 | ಶುಕ್ರವಾರ | ಅನಂತ ಪದ್ಮನಾಭ ವ್ರತ. |
| 24-9-95 | ಭಾನುವಾರ | ಮಹಾಲಯ ಅಮಾವಾಸ್ಯೆ. |
| 25-9-95 | ಸೋಮವಾರ | ಶರತ್ ನವರಾತ್ರಿ ಆರಂಭ. |
| | | ತಿರುಮಲೆಯಲ್ಲಿ ಬ್ರಹ್ಮೋತ್ಸವ ಆರಂಭ. |
| 26-9-95 | ಮಂಗಳವಾರ | ತಿರುಮಲೆಯಲ್ಲಿ ಧ್ವಜಾರೋಹಣ. |
| 30-9-95 | ಶನಿವಾರ | ತಿರುಮಲೆಯಲ್ಲಿ ಗರುಡೋತ್ಸವ. |

# ವಾರ್ತಾಲಹರಿ

## ಬೆಂಗಳೂರಿನಲ್ಲಿ ಮಹಾವಿಷ್ಣುಯಾಗ

ಬೆಂಗಳೂರಿನ ರಾಜಾಜಿನಗರದ ಮಾಧ್ವಸಂಘದಲ್ಲಿ ಜುಲೈ 3, 4, 5 ರಂದು ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳ ಅಧ್ಯಕ್ಷತೆಯಲ್ಲಿ, ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳ ನೇತೃತ್ವ ಹಾಗೂ ಮಾರ್ಗದರ್ಶನದಲ್ಲಿ ಶ್ರೀಮಹಾವಿಷ್ಣುಯಾಗ, ಕೋಟಿ ರಾಘವೇಂದ್ರ ಜಪಯಜ್ಞ ಹಾಗೂ ಮಹಾಭಾರತ ಜ್ಞಾನ ಯಜ್ಞಗಳು ಅಸಂಖ್ಯ ಭಕ್ತಬಂಧುಗಳಿಂದೊಡಗೂಡಿ ಸಂಪನ್ನವಾಯಿತು.

ವಿಶ್ವಶಾಂತಿ ಹಾಗೂ ಲೋಕಕಲ್ಯಾಣಗಳ ಸಾಧನೆಗಾಗಿ ಶ್ರೀಮಹಾವಿಷ್ಣುಯಾಗವೂ, ಗುರುಕಾರುಣ್ಯ ಸಾಧನೆಗಾಗಿ ಶ್ರೀ ರಾಘವೇಂದ್ರರ ಕೋಟಿ ಜಪಯಜ್ಞವೂ, ವಿಷ್ಣುವಿನ ಸರ್ವೋತ್ತಮತ್ವ ಹಾಗೂ ಸನಾತನ ಧರ್ಮದ ಮೌಲ್ಯ ಪ್ರಸಾರಸಾಧನೆಗಾಗಿ ಶ್ರೀಮನ್ಮಹಾಭಾರತ ಜ್ಞಾನ ಯಜ್ಞವೂ ನಡೆಯಿತು.

ತಿ.ತಿ.ದೇ. ಧರ್ಮ ಪ್ರಚಾರ ಪರಿಷತ್ ವತಿಯಿಂದ ಧನದ ವಂತಿಗೆಯೊಡನೆ, ತಿ.ತಿ.ದೇ. ದಾಸ ಸಾಹಿತ್ಯ ಪ್ರಾಜೆಕ್ಟ್‌ನ ವಿದ್ವದ್ಗೋಷ್ಠಿ ಭಜನಗೋಷ್ಠಿ ನಿರ್ವಹಣೆ, ತಿ.ತಿ.ದೇ. ಉದ್ಯೋಗಿಗಳ ಜಾಯಿಂಟ್ ಕೌನ್ಸಿಲ್ ಆಫ್ ಅಸೋಸಿಯೇಷನ್‌ನ ಸಂಸ್ಕೃತ ನಾಟಕ ಪ್ರಯೋಗದೊಡನೆ, ತಿ. ತಿ. ದೇವಸ್ಥಾನಗಳು ಈ ಮೂರು ದಿನಗಳ ಕಾರ್ಯಕ್ರಮದಲ್ಲಿ ಪಾಲುಗೊಂಡಿದ್ದು ಜನ ಮನ್ನಣೆಯನ್ನು ಪಡೆಯಿತು.

3-7-95 ರಂದು ಸೋಮವಾರ ಬೆಳಗ್ಗೆ ಫಲಿಮಾರು, ಭಂಡಾರಕೇರಿ ಮಠಾಧ್ಯಕ್ಷ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರ ಅಧ್ಯಕ್ಷತೆಯಲ್ಲಿ ಸ್ವಸ್ತಿ ಪುಣ್ಯಾಹವಾಗಿ



ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು ಹಾಗೂ ಶ್ರೀ ಶ್ರೀ ವಿಶ್ವೇಶ ತೀರ್ಥರು.

ಅರಣಿ ಮಥನದಿಂದ ಅಗ್ನಿ ಜನನವಾದ ನಂತರ ಎಂಟು ಕುಂಡಗಳಲ್ಲಿ ಯಜ್ಞವನ್ನು ಆರಂಭಿಸಲಾಯಿತು. ಶ್ರೀ ಖೇಡ ಕೃಷ್ಣಾಚಾರ್ಯರು ಯಜ್ಞ ನಿರ್ವಾಹಕರಾಗಿದ್ದರು. ಅಂದು ಮಧ್ಯಾಹ್ನ ಭಾರತೀ ಸೇವಾಸಂಘದ ಮಹಿಳೆಯರಿಂದ ಮುಖ್ಯದ ಕಾರ್ಯಕ್ರಮದ ನಂತರ ಮಹಾಭಾರತ ಜ್ಞಾನಯಜ್ಞವನ್ನು ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರ ಅಧ್ಯಕ್ಷತೆಯಲ್ಲಿ ಪೇಜಾವರ ಮಠಾಧೀಶ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ಉದ್ಘಾಟಿಸಿದರು. ಶ್ರೀ ಪ್ರಭಂಜನಾಚಾರ್ಯರು ಭಾರತದಲ್ಲಿ ಶ್ರೀಕೃಷ್ಣನ ಪಾತ್ರವನ್ನು ಕುರಿತೂ, ಶ್ರೀ ಮಳಗಿ ಜಯತೀರ್ಥಾಚಾರ್ಯರು ಮಹಾಭಾರತದಲ್ಲಿ ಭೀಮನ ಪಾತ್ರವನ್ನು ಕುರಿತೂ ಉಪನ್ಯಾಸ ನೀಡಿದರು. ಶ್ರೀಮತಿ ಪಂಕಜ ರಾಮಚಂದ್ರ ಬೃಂದದ ಭಕ್ತಿ ಸಂಗೀತವಾದ ಮೇಲೆ ಪೇಜಾವರ ಶ್ರೀಪಾದಂಗಳು ಅನುಗ್ರಹ ಭಾಷಣ ನೀಡಿದರು.

ಮಂಗಳವಾರ ಬೆಳಗ್ಗೆ ಶ್ರೀವಿಷ್ಣುಯಾಗ, ರಾಘವೇಂದ್ರ ಜಪಯಜ್ಞ ನಡೆಯುತ್ತಿದ್ದಂತೆ ಪೇಜಾವರರ ಅಧ್ಯಕ್ಷತೆಯಲ್ಲಿ ಜ್ಞಾನ ಯಜ್ಞ ಮುಂದುವರಿಯಿತು. ಶ್ರೀ ಚೆಂಬೋಳಿ ಪ್ರಹ್ಲಾದಾಚಾರ್ಯರು ಪರಿವಾ



ಉಪನ್ಯಾಸಗಳನ್ನು ನೀಡುತ್ತ ಸರ್ವಶ್ರೀ ಜಯತೀರ್ಥಾಚಾರ್ಯ,
ಹಯವದನ ಪುರಾಣಿಕ, ರಾಮಾಚಾರ್ಯ, ರಘೋತ್ತಮಾಚಾರ್ಯ
ನಾಗರಾಜರಾವ್ ಹಾಗೂ ವಾದಿರಾಜರಾವ್.



ಶ್ರೀ ವೆಂಕಟೇಶಾವಿರ್ಭಾವಃ ನಾಟಕದ ಎರಡು ನೋಟಗಳು.

ಸರು ವರ್ಣಿಸಿದ ವಿಷ್ಣುವೈಭವವನ್ನು ಕುರಿತೂ, ಕನಕ ದಾಸರ ಮುಂಡಿಗೆಗಳನ್ನು ಕುರಿತು ಶ್ರೀ ಶ್ಯಾಮಾಚಾರ್ಯರೂ, ಶ್ರೀ ಹಯವದನ ಪುರಾಣಿಕರು ಹರಿದಾಸರಲ್ಲಿ ಅನ್ನದೇವತಾ ಉಪಾಸನೆಯನ್ನು ಕುರಿತೂ ವಿವರಗಳನ್ನು ಒದಗಿಸಿದರು.

ಅಂದು ಮಧ್ಯಾಹ್ನ ಅಂಭೃಣೀ ಮಹಿಳಾ ಮಂಡಳಿಯ ವತಿಯಿಂದ ಭಜನೆ ಕಾರ್ಯಕ್ರಮವಾದ ಮೇಲೆ ಫಲಿಮಾರು ಶ್ರೀಗಳ ಅಧ್ಯಕ್ಷತೆಯಲ್ಲಿ ಚರ್ಚಾಗೋಷ್ಠಿ ಸರ್ವಶ್ರೀ ಹರಿದಾಸ ಭಟ್ಟರು, ಖೇಡ ವಾಸುದೇವಾಚಾರ್ಯರು, ಡಿ. ಪ್ರಹ್ಲಾದಾಚಾರ್ಯರು, ಖೇಡ ಕೃಷ್ಣಾಚಾರ್ಯರುಗಳು ವಿಚಾರಪ್ರದ ಚರ್ಚೆಗಳನ್ನು ಮಂಡಿಸಿದರು. ತಂತ್ರಸಾರದ ಹಿರಿಮೆಯನ್ನು ಕುರಿತು ಶ್ರೀ ಕೆ. ಸತ್ಯನಾರಾಯಣರಾವ್ ಮಾತನಾಡಿದರು.

ತಿ.ತಿ.ದೇ. ಜೆ.ಸಿ.ಎ. ಯವರು ಶ್ರೀವೇಂಕಟೇಶಾವಿರ್ಭಾವಃ ಸಂಸ್ಕೃತ ನಾಟಕವನ್ನು ನಡೆಸಿಕೊಟ್ಟರು. ಸುದರ್ಶನ ಭಟ್ಟಾಚಾರ್ಯರು ತೆಲುಗಿನಲ್ಲಿ ಬರೆದ ನಾಟಕವನ್ನು ಸಂಸ್ಕೃತದಲ್ಲಿ ಪಡಿಮೂಡಿಸಿ, ನಿರ್ದೇಶಿಸಿ, ಭೃಗುಮುನಿಯ ಪಾತ್ರವನ್ನೂ ನಿರ್ವಹಿಸಿ ಪ್ರೇಕ್ಷಕರ ಮೆಚ್ಚುಗೆಯನ್ನು ಗಳಿಸಿದವರು ನಟರತ್ನ ಶ್ರೀ ರಂಗಭಟ್ಟರ್ ವೆಂಕಟೇಶ್ವರಸ್ವಾಮಿಯಾಗಿ ಶ್ರೀ ಎ. ಚೆಂಗಾರೆಡ್ಡಿ, ನಾರದನಾಗಿ ಎಸ್. ಗೋ ಲಾಚಾರ್ಯ, ಬ್ರಹ್ಮನಾಗಿ ಶ್ರೀ ಇ. ಜಿ. ಹೇ ತಕುಮಾರ್, ನೃತ್ಯ ನಿರ್ದೇಶಕ ಶ್ರೀ ಕೋಟೇ ರಾವ್ ಶಿವನಾಗಿ, ಪಾರ್ವತಿಯಾಗಿ ಕುಮಾರಿ. ಕ ಮೆಚ್ಚುಗೆಯನ್ನು ಗಳಿಸಿದರು. ಭಾಷೆ ಸಂ ವಾದರೂ ಸರಳವಾಗಿದ್ದು, ನವರಸಭರಿತವಾಗಿ ಎಲ್ಲರಿಗೂ ಅರ್ಥವಾಗಿ ಪ್ರೇಕ್ಷಕರು ತನ್ಮಯ ದ್ದರು.

ನಾಟಕದ ನಂತರ ಶ್ರೀ ಪೇಜಾವರರು ಅನು ಭಾಷಣ ಮಾಡಿದರು.

5-7-95 ರಂದು ವಿಷ್ಣು ಯಾಗ ಮುಂದು ದಂತೆ, ಜ್ಞಾನಯಜ್ಞದಲ್ಲಿ ಶ್ರೀ ಮಾಳಗಿ ರಾ ಚಾರ್ಯರು ದಾಸರ ಕೃತಿಗಳಲ್ಲಿ ಸದಾಚಾ ಅಗತ್ಯವನ್ನು ಕುರಿತೂ, ಶ್ರೀ ರಘೋತ್ತಮಾ ರ್ಯರು ಹರಿಕಥಾಮೃತಸಾರದ ವಿಭೂತಿ ರು ಗಳ ಬಗ್ಗೆಯೂ, ಶ್ರೀ ಎಸ್. ನಾಗರಾಜರಾಯ ದಾಸಸಾಹಿತ್ಯದಲ್ಲಿ ಭಕ್ತಿ ಪ್ರಾಧಾನ್ಯವನ್ನು ಕುರಿ ಉಪನ್ಯಾಸಗಳನ್ನು ನೀಡಿದರು.

ಅಂದು ಮಧ್ಯಾಹ್ನ ಅಲಂಕೃತ ಆನೆಯ ಮೆ ಮಹಾಭಾರತ, ರಾಮಾಯಣ, ಭಾಗವತ, ನ್ಯಾ ಸುಧಾಗ್ರಂಥಗಳ, ಶ್ರೀ ವೇದವ್ಯಾಸರ ಮೆರವ ನಡೆಯಿತು. ಸಂಜೆ ಶ್ರೀ ಮಹಾವಿಷ್ಣುಯಾ ಸಮಾರೋಪ ನಡೆಯಿತು. ವಿದ್ವತ್ ಸಂಭಾ ಸನ್ಮಾನಗಳು ನಡೆದವು. ದಾಸ ಸಾಹಿತ್ಯ ಪ್ರಾಜೆ ವಿವಿಧ ರೀತಿಯ ಕಾರ್ಯಕ್ರಮಗಳನ್ನು ವಿವರಿ ಶ್ರೀ ವಾದಿರಾಜರಾವ್ ಅವರು ಶ್ರೀ ಮನ್ಮಹಾ ರತ ಜ್ಞಾನ ಯಜ್ಞದಲ್ಲಿ ಮುಖ್ಯ ಭೂಮಿಕೆಯ ನಿರ್ವಹಿಸಿದ್ದರು.



ಸಂಗೀತ ಸಭೆಯಲ್ಲಿ ಶ್ರೀಮತಿ ಪಂಕಜಾ ರಾಮಚಂದ್ರ, ಹಾಗೂ ಅಂಭೃಣೀ ಮಹಿಳಾಮಂಡಳಿ.

## ತಿರುಮಲೆಯಲ್ಲಿ ಪ್ರಧಾನಮಂತ್ರಿ

ಪ್ರಧಾನಮಂತ್ರಿ ಶ್ರೀ ಪಿ. ವಿ. ನರಸಿಂಹರಾವ್ ಅವರು ಜುಲೈ 6 ರಂದು ಸಂಜೆ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು. ಆಲಯ ಮಹಾದ್ವಾರದ ಬಳಿ ಅವರಿಗೆ ಆಂಧ್ರ ಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ, ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಸಂರಕ್ಷಣಾಧಿಕಾರಿ ಶ್ರೀ ಕೃಷ್ಣಂರಾಜು, ಎ. ಜಿ. ಓ. ಶ್ರೀ ಜನಾರ್ದನ ನಾಯುಡು ಮೊದಲಾದವರು ಘನವಾಗಿ ಸ್ವಾಗತ ನೀಡಿದರು. ಆಲಯದಲ್ಲಿ ಅವರಿಗೆ ಆರತಿಯನ್ನು ನೀಡಿ ಶ್ರೀನಿವಾಸ ವೈಭವವನ್ನು ವಿವರಿಸಿ ಹೇಳಲಾಯಿತು. ರೇಷ್ಮೆ ವಸ್ತ್ರವನ್ನು ಬಹುಮಾನಿಸಲಾಯಿತು. ರಂಗನಾಯಕ ಮಂಟಪದಲ್ಲಿ ವೇದಾಶೀರ್ವಾದ ಪ್ರಸಾದಗಳನ್ನು ನೀಡಲಾಯಿತು. ಪ್ರಧಾನಿಗಳು ಹುಂಡಿಯಲ್ಲಿ ತಮ್ಮ ಕಾಣಿಕೆಯನ್ನು ಅರ್ಪಿಸಿದರು.

ಅಂದು ರಾತ್ರಿ ತಿರುಮಲೆಯ ಶ್ರೀ ಪದ್ಮಾವತೀ ಅತಿಥಿಗೃಹದಲ್ಲಿ ವಿಶ್ರಾಂತಿ ಪಡೆದ ಪ್ರಧಾನಮಂತ್ರಿಗಳು ಶುಕ್ರವಾರ ಬೆಳಗ್ಗೆ ಉದಯಾತ್ಪೂರ್ವದಲ್ಲೇ ಸ್ವಾಮಿಯ ದರ್ಶನ ಪಡೆದರು. ಅವರಿಗೆ ತಿ.ತಿ.ದೇ. ಆಡಿಯೋ ವೀಡಿಯೋ ಕ್ಯಾಸೆಟ್‌ಗಳನ್ನೂ, ಧಾರ್ಮಿಕ ಕೃತಿಗಳನ್ನೂ ಬಹುಮಾನಿಸಲಾಯಿತು. ನಂತರ ಅವರು ತಿರುಮಲೆಯಿಂದ ತಿರುಪತಿಯ ಹ್ಯಾಲಿಪ್ಯಾಡನ್ನು ಸೇರಿ ದೆಹಲಿಗೆ ಪ್ರಮಾಣ ಬೆಳೆಸಿದರು.



## ಸ್ವಾಮಿ ಸೇವೆಯಲ್ಲಿ ರಾಜಾಸ್ಥಾನದ ಮುಖ್ಯಮಂತ್ರಿ

ರಾಜಾಸ್ಥಾನದ ಮುಖ್ಯಮಂತ್ರಿ ಶ್ರೀ ಭೈರಾನ್ ಸಿಂಗ್ ಷೇಖಾವತ್ ಅವರು ಕುಟುಂಬ ಸಹಿತರಾಗಿ ಜುಲೈ 9 ರಂದು ಭಾನುವಾರ ತಿರುಮಲೆಗೆ ಆಗಮಿಸಿದರು. ಅವರನ್ನು ಆಲಯದ ಬಳಿ ತಿ.ತಿ.ದೇ. ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಆಲಯ ಸ್ಪೆಷಲ್ ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್ ಮೊದಲಾದವರು ಸ್ವಾಗತಿಸಿದರು. ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದ ನಂತರ ಅವರು ತಿರುಪತಿಯಲ್ಲಿ ನಿಲ್ಲಿಸಿದ್ದ ಹೆಲಿಕಾಪ್ಟರಿನಲ್ಲಿ ರಾಜಾಸ್ಥಾನಕ್ಕೆ ಹಿಂದಿರುಗಿದರು.



## ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ಪ್ರಥಮ ಘಟಿಕೋತ್ಸವ

ತಿರುಪತಿಯ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ಪ್ರಥಮ ಘಟಿಕೋತ್ಸವವು ಜುಲೈ 1 ರ ಶನಿವಾರ ಸಂಪನ್ನವಾಯಿತು.

ಪ್ರಥಮ ಘಟಿಕೋತ್ಸವದಲ್ಲಿ ವಿವಿಧ ಸಾಂಸ್ಕೃತಿಕ ರಂಗಗಳಲ್ಲಿ ನಿಷ್ಣಾತರಾದ ನಾಲ್ಕು ಮಂದಿಗೆ ಮಹಾಮಹೋಪಾಧ್ಯಾಯ ಪ್ರಶಸ್ತಿ, ನಾಲ್ಕು ಮಂದಿ ವಿದ್ವಾಂಸರಿಗೆ ವಿದ್ಯಾವಾಚಸ್ಪತಿ ಪ್ರಶಸ್ತಿಯನ್ನೂ ನೀಡಲಾಯಿತು. ಜೊತೆಗೇ 1992 ರಿಂದ ವಿವಿಧ ವಿಷಯಗಳಲ್ಲಿ ಪರಿಶೋಧನೆಗಳನ್ನು ಕೈಗೊಂಡು ಯಶಸ್ವಿ ಸಿದ್ಧಾಂತ ಕೃತಿಗಳನ್ನು ಸಮರ್ಪಿಸಿದ 39 ಮಂದಿಗೆ ವಿದ್ಯಾವಾರಧಿ (ಪಿ.ಎಚ್.ಡಿ.) ಹಾಗೂ ಸ್ನಾತಕೋತ್ತರ ಪರೀಕ್ಷೆಗಳಲ್ಲಿ ತೇರ್ಗಡೆಯಾದ 43 ಮಂದಿಗೆ ಶಾಸ್ತ್ರೀ ಹಾಗೂ ಆಚಾರ್ಯ, ಶಿಕ್ಷಾಶಾಸ್ತ್ರೀ ಪದವಿಗಳನ್ನು ಪ್ರದಾನ ಮಾಡಲಾಯಿತು.

ಘಟಿಕೋತ್ಸವ ಭಾಷಣ ನೀಡುತ್ತ ಕೇಂದ್ರ ಮಂತ್ರಿ ಶ್ರೀ ಪ್ರಣಬಮುಖರ್ಜೀ ಅವರು ನಮ್ಮ ಸಂಸ್ಕೃತಿಯ

ಬಗ್ಗೆ ಬೆಳಕಿಗೆ ಬರಬೇಕಾದ ಅಂಶಗಳು ಬಹಳಷ್ಟು ಇವೆಯೆಂದೂ ಸಂಸ್ಕೃತಾಧ್ಯಯನವೇ ಈ ಎಲ್ಲ ಪರಿಶೋಧನೆಗಳಿಗೂ ಬುನಾದಿ ಆಗಬೇಕಿದೆ ಎಂದೂ ವಿವರಿಸಿದರು.

ವಿದ್ಯಾಪೀಠದ ಉಪಕುಲಪತಿ ಡಾ|| ಎಸ್. ಬಿ. ರಘುನಾಥಾಚಾರ್ಯರು ತಮ್ಮ ವರದಿ ಉಪನ್ಯಾಸದಲ್ಲಿ ವಿದ್ಯಾಪೀಠದ ಪ್ರಗತಿಯನ್ನು ವಿವರಿಸಿ ಕೇದ್ರೀಯ ವಿದ್ಯಾಪೀಠ ಪೂರ್ಣ ಪ್ರಮಾಣದ ವಿಶ್ವವಿದ್ಯಾಲಯವಾಗಬೇಕಿದೆಯೆಂದೂ ಅದಕ್ಕಾಗಿ ಕೃಷಿ ನಡೆದಿದೆ ಎಂದೂ ವಿವರಿಸಿದರು.

## ವೈಭವದ ಆಣಿವರ ಆಸ್ಥಾನ

ತಿರುಮಲೆಯ ದೇವಾಲಯದಲ್ಲಿ ವಾರ್ಷಿಕ ಲೆಕ್ಕ ಸಮರ್ಪಣೆಯ ಆಣಿವರ ಆಸ್ಥಾನ ವೈಭವದಿಂದ ಜುಲೈ 17 ರಂದು ಸಂಪನ್ನವಾಯಿತು. ಮದರಾಸಿನ ಭಕ್ತರೊಬ್ಬರು ಕೊಡಮಾಡಿದ ನೂತನ ಕಿರೀಟವನ್ನು ಮಲೆಯಪ್ಪಸ್ವಾಮಿಗೆ ಅಲಂಕರಿಸಿದನಂತರ ಬಂಗಾರದ ಬಾಗಿಲಿನಲ್ಲಿ ಶ್ರೀದೇವಿ ಭೂದೇವಿ, ವಿಶ್ವಕ್ಸೇನ ಸಹಿತರಾಗಿ ಸ್ವಾಮಿ ಓಲಗಕ್ಕೆ ಬರಲು ಅವರ ಪಾದಗಳ ಮುಂದೆ ಲೆಕ್ಕ ಪತ್ರಗಳನ್ನು ಸಮರ್ಪಿಸಲಾಯಿತು.

ಅಂದು ಸಂಜೆ ಆಣಿವರ ಆಸ್ಥಾನದ ಅಂಗವಾಗಿ ಅಲಂಕರಿಸಿದ ಹೂವಿನ ಪಲ್ಲಕಿಯಲ್ಲಿ ನೂತನ ಕಿರೀಟಧಾರಿ ಶ್ರೀ ಮಲೆಯಪ್ಪಸ್ವಾಮಿ, ಶ್ರೀದೇವಿ ಭೂದೇವಿ ಸಹಿತರಾಗಿ ಪುರವೀಧಿಗಳಲ್ಲಿ ಆಗಮಿಸಿದಾಗ ಭಕ್ತರು ಅಪಾರವಾಗಿ ಸೇರಿ, ಸ್ವಾಮಿಯನ್ನು ಉತ್ಸಾಹ ಸಂಭ್ರಮಗಳಿಂದ ಸ್ವಾಗತಿಸಿದರು.

## ಸ್ವಾಮಿ ಸೇವೆಯ ಬಾನುಲಿ ಪ್ರಸಾರ

ತಿರುಮಲೆಯ ಆಲಯದಲ್ಲಿ ದಿನವೂ ನಡೆಯುವ ಸುಪ್ರಭಾತ, ಅರ್ಚನೆ, ತೋಮಾಲೆಸೇವೆ, ಕೊಲುವು ಸೇವೆಗಳನ್ನು ತಿರುಪತಿಯ ರೇಡಿಯೋ ಕೇಂದ್ರ ಪ್ರತಿ ದಿನವೂ ಬೆಳಗ್ಗೆ ಪ್ರಸಾರ ಮಾಡುವ ಕಾರ್ಯಕ್ರಮ ಜುಲೈ 17 ರಿಂದ ಆರಂಭವಾಗಿದೆ. ತಿರುಪತಿಯ ಸುತ್ತ ಮುತ್ತಣ ಪ್ರಾಂತ್ಯಗಳಲ್ಲಿ ದಿನವೂ ಬೆಳಗ್ಗೆ ಈ ಕಾರ್ಯಕ್ರಮ ಯಾತ್ರಿಕರಿಗೆ, ಭಕ್ತರಿಗೆ ಮುದವನ್ನುಂಟುಮಾಡುವುದಾಗಿದ್ದು ತಿರುಪತಿಯ ಅಲಿಪಿರಿ, ಬಸ್‌ಸ್ಟಾಂಡ್, ರೈಲ್ವೆಸ್ಟೇಷನ್, ಸತ್ರಗಳ ಬಳಿ ತಿ.ತಿ.ದೇ. -- ಧ್ವನಿವರ್ಧಕಗಳನ್ನಿಟ್ಟು ಭಕ್ತರಿಗೆ ಈ ಕಾರ್ಯಕ್ರಮಗಳು ಕೇಳಿಸುವಂತೆ ಮಾಡಲಾಗಿದೆ.

ಈ ದೈನಂದಿನ ಪ್ರಸಾರ ಕಾರ್ಯಕ್ರಮದ ಮೂಲ ಕಾರಣ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್.



ಮಲೆಯಪ್ಪಸ್ವಾಮಿಯ ನೂತನ ಕಿರೀಟ.

## ಸ್ವಾಮಿಗೆ ಹೊಸ ಕಿರೀಟ

ಮದರಾಸಿಗೆ ಸೇರಿದ ಶ್ರೀ ರಾಮಸ್ವಾಮಿ ಒಡೆಯರ್ ತಿರುಮಲೆಯ ಮಲಯಪ್ಪಸ್ವಾಮಿಗಾಗಿ ಈಚೆಗೆ ವಜ್ರಗಳಿಂದ ಕೂಡಿದ 18 ಲಕ್ಷ ರೂ.ಗಳ ವೆಚ್ಚದ ಕಿರೀಟವನ್ನು ಸಮರ್ಪಿಸಿದ್ದಾರೆ.

ಈ ಕಿರೀಟವನ್ನು ಜುಲೈ 17 ರಂದು ಆನಿವರ ಆಸ್ಥಾನದಲ್ಲಿ ಮಲೆಯಪ್ಪಸ್ವಾಮಿಗೆ ಅಲಂಕರಿಸಲಾಗಿದ್ದು ಅದಕ್ಕೂ ಮೊದಲು ಭಕ್ತರು ನೋಡಲೆಂದು ತಿ.ತಿ.ದೇ. ಪರಿಪಾಲನಾಭವನದ ಖಜಾನೆಯ ಪಕ್ಕದ ಕೊಠಡಿಯಲ್ಲಿಡಲಾಗಿದ್ದಿತು. ಮಂಗಳವಾದ್ಯ ವೇದಮಂತ್ರಗಳ ಪ್ರತ್ಯೇಕ ಅರ್ಚನೆಯ ನಂತರ ಜನರು ತಂಡೋಪತಂಡವಾಗಿ ಬಂದು ಈ ಕಿರೀಟವನ್ನು ದರ್ಶಿಸಿ ಆನಂದಿಸಿದರು. ಅರ್ಚನೆಯ ಕಾರ್ಯಕ್ರಮದ ನಂತರ ಮಾತನಾಡುತ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರು ಮಲೆಯಪ್ಪಸ್ವಾಮಿಗೆ 700 ವರ್ಷಗಳಷ್ಟು ಪ್ರಾಚೀನವಾದ ವಜ್ರಕಿರೀಟದ ಜೊತೆಗೇ ಗದ್ವಾಲ ಸಂಸ್ಥಾನ ಸಮರ್ಪಿಸಿದ ಕಿರೀಟ, ಮುತ್ತಿನ ಕಿರೀಟ, ವೈರಮುಡಿ ಕಿರೀಟಗಳು ಇರುವುದಾಗಿಯೂ, ಈಗ ಶ್ರೀ ರಾಮಸ್ವಾಮಿ ಒಡೆಯರ್ ಸಮರ್ಪಿಸಿರುವ ಕಿರೀಟ ಪಾಂಡ್ಯರಾಜರ ತಲೆಗೂದಲ ಗಂಟಿನಂತೆ ಸ್ವಲ್ಪ ವಿಭಿನ್ನವಾಗಿದೆ ಎಂದೂ ವಿವರಿಸಿದರು.

## 200 ಕೋಟಿ ದಾಟಿದ ತಿ.ತಿ.ದೇ. ಠೇವಣಿಗಳು

ಜೂನ್ 1995 ರ ಕೊನೆಯಲ್ಲಿ ತಿ.ತಿ.ದೇ.ಗಳ ಠೇವಣಿಗಳು 200 ಕೋಟಿ ರೂಪಾಯಿಗಳನ್ನು ಮೀರಿ ಮುಂದೆ ನಡೆದಿದೆ ಎಂದು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ತಿಳಿಸಿದ್ದಾರೆ. ಮೊದಲು ಎಂದೂ ಇಲ್ಲದಂತೆ ಈ ಹಿಂದಿನ ಆರು ತಿಂಗಳಲ್ಲಿ 17.5 ಕೋಟಿ ರೂ.ಗಳ

ಕೇವಣಿಯನ್ನು ಸಾಧಿಸಿರುವುದಾಗಿಯೂ ಇವರಿಂದಾಗಿ 1994 ರ ವರ್ಷದ ಕೊನೆಯದಿನ 184.97 ಕೋಟಿ ರೂ.ಗಳಾಗಿದ್ದದ್ದು ಈಗ 202.02 ಕೋಟಿ ಮುಟ್ಟಿದೆಯೆಂದೂ, ಇದಕ್ಕೆ ಹುಂಡಿ ಆದಾಯವೇ ಮುಖ್ಯ ಕಾರಣವಾದರೂ, ವೆಚ್ಚವಲ್ಲಿ ಸಮತೋಲನ, ಉಳಿತಾಯ ಮೊದಲಾದವೂ ಸಹ ಪೂರಕವಾಗಿವೆ ಎಂದು ಅವರು ವಿವರಿಸಿದರು.

## ಸ್ವಾಮಿಯನ್ನು ಸಂದರ್ಶಿಸಿದ ಶೃಂಗೇರಿ ಮಠಾಧೀಶರು

ಜೂನ್ 22 ರಂದು ಗುರುವಾರ ಸಂಜೆ ಶೃಂಗೇರಿಯ ಶಾರದಾಪೀಠದ ಅಧ್ಯಕ್ಷರಾದ ಶ್ರೀ ಶ್ರೀ ಭಾರತೀತೀರ್ಥ ಸ್ವಾಮಿಜೀ ಅವರು ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿದರು. ಅವರಿಗೆ ಆಲಯದ ಬಳಿ ತಿ.ತಿ.ದೇ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಆಲಯ ಸ್ಪೆಷಲ್ ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್ ಪ್ರಧಾನ ಅರ್ಚಕರು ಶ್ರೀ ವೆಂಕಟರಮಣ ದೀಕ್ಷಿತರು ಸ್ವಾಗತವನ್ನು ನೀಡಿದರು. ಸ್ವಾಮಿಜೀಯವರು ತಿರುಮಲೆಯ ಶೃಂಗೇರಿ ಮಠದಲ್ಲಿ ಅಂದು ರಾತ್ರಿ ತಂಗಿದ್ದು ಶುಕ್ರವಾರವೂ ದೇವರನ್ನು ದರ್ಶಿಸಿ ಆರಾಧಿಸಿದರು.

ಶ್ರೀ ಶ್ರೀ ಭಾರತೀ ತೀರ್ಥ ಸ್ವಾಮಿಜೀಯವರು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಆಲಯಕ್ಕೂ ಭೇಟಿ ನೀಡಿ ದೇವರನ್ನು ಸಂದರ್ಶಿಸಿ ಆರಾಧಿಸಿದರು.



ತಿರುಮಲೆಯ ಕೇಂದ್ರ ಸ್ವಾಗತ ಕಚೇರಿಯಲ್ಲಿ ಕಂಪ್ಯೂಟರ್ ಆಳವಡಿಕೆಯ ಆರಂಭ. ಚಿತ್ರದಲ್ಲಿ ಮುಜರಾಯಿ ಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರನ್ನು ಕಾಣಬಹುದು.

## ತಿರುಮಲೆಯಲ್ಲಿ ಕೇಂದ್ರ ಮಂತ್ರಿ

ಕೇಂದ್ರ ವಿದೇಶಾಂಗ ಮಂತ್ರಿ ಶ್ರೀ ಪ್ರಣಬ ಮುಖರ್ಜೀ ಅವರು ಜುಲೈ 1 ರಂದು ಶನಿವಾರ



ತಿರುಮಲೆಯಲ್ಲಿ ಯಾತ್ರಿಕ ಸೌಲಭ್ಯಕ್ಕಾಗಿ ಈಗಿರುವ ಉಚಿತ ವಾಹನ ಸೌಲಭ್ಯಕ್ಕೆ-
ಮತ್ತೊಂದು ಹೊಸ ಬಸ್ ಅನ್ನು ಸೇರಿಸಲಾಯಿತು. ಈ ನೂತನ ಬಸ್‌ನ ಆರಂಭ ಸಮಾರಂಭದಲ್ಲಿ
ಆಂಧ್ರಪ್ರದೇಶ ಮುಜರಾಯಿ ಇಲಾಖಾಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ಟೇಪನ್ನು ಕತ್ತರಿಸುತ್ತಿರುವರು.
ಅವರ ಹಿಂದೆ ಮುಜರಾಯಿ ಇಲಾಖಾ ಕಮಿಷನರ್ ಶ್ರೀ ಸಿ.ಎಚ್. ಸತ್ಯನಾರಾಯಣ ಅವರನ್ನೂ
ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳನ್ನೂ ಕಾಣಬಹುದು.

ರಾತ್ರಿ ತಿರುಮಲೆಗೆ ಆಗಮಿಸಿ ಸ್ವಾಮಿಯ ಸಂದರ್ಶನ ಪಡೆದು ಆರಾಧಿಸಿದರು. ಅವರನ್ನು ಆಲಯದಬಳಿ ತಿ.ತಿ.ದೇ.ಗಳ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಮೊದಲಾದವರು ಸ್ವಾಗತಿಸಿ, ಆಲಯದ ಚರಿತ್ರೆ ಸ್ವಾಮಿ ವೈಭವವನ್ನು ಕುರಿತು ವಿವರಿಸಿದರು.

## ವಿಶೇಷ ಪ್ರಾಧಿಕಾರದ ತೀರ್ಮಾನಗಳು

ಭಕ್ತರ ಸೌಕರ್ಯದ ದೃಷ್ಟಿಯಿಂದ ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಅಭಿಷೇಕ ಸಮಯ ಬೆಳಗ್ಗೆ 7 ರಿಂದ 9 ಗಂಟೆಯವರೆಗೆ ಎಂದು ತಿ.ತಿ.ದೇ.ಗಳ ವಿಶೇಷ ಪ್ರಾಧಿಕಾರ ನಿರ್ಣಯಿಸಿದೆ.

ತಿರುಮಲೆಯ ಪ್ರಸಾದವಾದ ಲಾಡುವಿನ ನಾಣ್ಯತೆಯನ್ನು ಪರಿರಕ್ಷಿಸುವ ಸಲುವಾಗಿ ಕರ್ನಾಟಕದ ಸಿ.ಎಫ್.ಟಿ.ಆರ್.ಐ.ಗೆ ಎರಡು ಲಕ್ಷರೂ.ಗಳ ವೆಚ್ಚದಲ್ಲಿ ಎರಡು ವರ್ಷದ ಕನ್ಸಲ್ಟೆನ್ಸಿ ನೀಡಬೇಕೆಂದು ತೀರ್ಮಾನಿಸಲಾಗಿದೆ.

ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿ ತತ್ಕಾಲಿಕವಾಗಿ ಕಂಪ್ಯೂಟರನ್ನು ಏರ್ಪಡಿಸಲು ತೀರ್ಮಾನಿಸಲಾಗಿದೆ.

ತಿ.ತಿ.ದೇ. ಪುಸ್ತಕ ಪ್ರಕಾಶನ ವಿಭಾಗದಲ್ಲಿನ ತಜ್ಞ ಸಮಿತಿಯನ್ನು ಏರ್ಪಾಡು ಮಾಡಲು ತೀರ್ಮಾನಿಸಲಾಗಿದೆ.

ವಿಶೇಷ ಪ್ರಾಧಿಕಾರದ ಸಮಾವೇಶದ ತೀರ್ಮಾನಗಳನ್ನು ತಿಳಿಸಲು ತಿರುಪತಿಯ ಶ್ರೀ ಪದ್ಮಾವತೀ ಅತಿಥಿಗೃಹದಲ್ಲಿ ಏರ್ಪಡಿಸಿದ ಪತ್ರಿಕಾ ಸಮಾವೇಶದಲ್ಲಿ ಕಾರ್ಯನಿರ್ವಹಣಾಧಿಕಾರಿಗಳೊಡನೆ ಸಂರಕ್ಷಣಾಧಿಕಾರಿ ಶ್ರೀ ಕೃಷ್ಣಂರಾಜು, ಪೌರಸಂಬಂಧಾಧಿಕಾರಿ ಶ್ರೀ ಸುಭಾಷ್‌ಗೌಡ್ ಅವರುಗಳೂ ಪಾಲುಗೊಂಡಿದ್ದರು.

## ಶ್ರೀ ವರದೇಂದ್ರರ ಆರಾಧನೆ

ಲಿಂಗಸೂಗೂರಿನಲ್ಲಿ ಶ್ರೀ ವರದೇಂದ್ರರ ಆರಾಧನೆ ಜುಲೈ 3, 4, 5 ರಂದು ವೈಭವದಿಂದ ಯಶಸ್ವಿಯಾಯಿತು.

ದಾಸ ಸಾಹಿತ್ಯ ಪ್ರಾಜೆಕ್ಟ್ ವತಿಯಿಂದ ಉಪನ್ಯಾಸಗೋಷ್ಠಿಗಳನ್ನು ಏರ್ಪಡಿಸಿದ್ದು ಜಯರಾಮಾಚಾರ್ಯ ಸರಜೋಷಿ ಅವರೂ, ಶ್ರೀ ಮಾಧವಾಚಾರ್ಯಗಲಗಲಿ ಅವರೂ ಉಪನ್ಯಾಸಗಳನ್ನು ನೀಡಿದರು. ಶಿವಮೊಗ್ಗ ಶ್ರೀನಿವಾಸದಾಸರು ಹರಿಕಥೆಯನ್ನು ನೆರವೇರಿಸಿಕೊಟ್ಟರು. ಸಿಂಧನೂರು, ಸಂತೆಕಲ್ಲೂರು, ಮಾನವಿಗಳ ಭಜನಾಮಂಡಳಿಗಳು ಭಜನಗೋಷ್ಠಿಗಳಲ್ಲಿ ಪಾಲುಗೊಂಡಿದ್ದವು.

ಶ್ರೀ ವರದೇಂದ್ರರಿಗೆ ತಿರುಮಲೆಯ ಶೇಷವಸ್ತ್ರವನ್ನು ಮೆರವಣಿಗೆಯಲ್ಲಿ ತಾಳ ಮೇಳ ಭಜನೆಗಳೊಂದಿಗೆ ತೆಗೆದುಕೊಂಡು ಬಂದು ಸಮರ್ಪಿಸಲಾಯಿತು.

### ತಿದ್ದುಪಡಿ

ಜುಲೈ 1995 ಸಂಚಿಕೆಯ ರಕ್ಷಾಪತ್ರ ಚಿತ್ರಸೂಚಿಯಲ್ಲಿ ಪೆರಿಯಾಳ್ವಾರ್ ಹಾಗೂ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬ್ರಹ್ಮೋತ್ಸವದಲ್ಲಿನ ಶೇಷವಾಹನ ಚಿತ್ರಗಳು ಪ್ರಮಾದವಶಾತ್ ಅದಲು ಬದಲಾಗಿವೆ. ಓದುಗರು ಸಹಾನುಭೂತಿಯಿಂದ ತಿದ್ದಿಕೊಳ್ಳಬೇಕೆಂದು ಕೋರಲಾಗಿದೆ. --ಸಂಪಾದಕ

# ಸುಪ್ರಭಾತ ಸ್ಪರ್ಧೆಗಳು

ಪ್ರತಿವಾದಿ ಭಯಂಕರ ಅಣ್ಣನ್ ಅವರ ಅವತಾರ ಉತ್ಸವದ ಅಂಗವಾಗಿ ಅವರು ರಚಿಸಿದ ಶ್ರೀ ವೆಂಕಟೇಶ್ವರ ಸುಪ್ರಭಾತದ ಕಂಠಪಾಠ ಸ್ಪರ್ಧೆಗಳು ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್ ವತಿಯಿಂದ ಶಾಲಾ ವಿದ್ಯಾರ್ಥಿಗಳ ನಡುವೆ 19-7-95 ರಂದು ನಡೆದು ಸಂಪನ್ನವಾಯಿತು.

ಸರ್ವಶ್ರೀ ಮುದಿವರ್ತಿ ಕೊಂಡಮಾಚಾರ್ಯ, ಪಿ. ಆರ್. ರಂಗರಾಜನ್, ಪಿ. ವಸಂತ, ಇ.ಎ. ಸಿಂಗರಾಚಾರ್ಯುಲು, ಇ. ಜಿ. ಹೇಮಂತಕುಮಾರ್, ಶ್ರೀಮತಿ ಕುಸುಮ ಕುಮಾರಿ ಅವರುಗಳು ನಿರ್ಣಯಕಾರರಾಗಿದ್ದ ಸ್ಪರ್ಧೆಗಳಲ್ಲಿ ಎರಡು ವಿಭಾಗಗಳಲ್ಲಿ - 9, 10 ನೇ ತರಗತಿಯ ವಿದ್ಯಾರ್ಥಿಗಳು ಹಾಗೂ 6, 7, 8 ನೇ ತರಗತಿಯ ವಿದ್ಯಾರ್ಥಿಗಳು - ಮೂರು ಮೂರು ಬಹುಮಾನಗಳನ್ನು ತಲಾ ಇಬ್ಬರಿಗೆ ಘೋಷಿಸಲಾಗಿದೆ.

**ಹಿರಿಯರು :**

| | | | |
|---|---|---|---|
| 1. ಬಹುಮಾನ | 50 ಗ್ರಾಂ ರಜತ ಪದಕ | ಶ್ರೀ ಸಿ. ಮಧುವಿಜಯ್ | 9ನೇ ತರಗತಿ. |
| | | ಕು|| ಸಿ. ಉಷಾಮಾಧುರಿ | 9ನೇ ತರಗತಿ. |
| 2. ಬಹುಮಾನ | 40 ಗ್ರಾಂ ರಜತ ಪದಕ | ಶ್ರೀ ಬಿ. ಪಿ. ಮಹೇಷ್ | 9ನೇ ತರಗತಿ. |
| | | ಕು|| ಎನ್. ರಾಧಿಕಾ | 10ನೇ ತರಗತಿ. |
| 3. ಬಹುಮಾನ | 30 ಗ್ರಾಂ ರಜತ ಪದಕ | ಶ್ರೀ ಟಿ. ರಾಜಗೋಪಾಲನ್ | 10ನೇ ತರಗತಿ. |
| | | ಕು|| ಆರ್. ಸಂಧ್ಯಾರಾಣಿ | 9ನೇ ತರಗತಿ. |

**ಕಿರಿಯರು :**

| | | | |
|---|---|---|---|
| 1. ಬಹುಮಾನ | 40 ಗ್ರಾಂ ರಜತ ಪದಕ | ಶ್ರೀ ಜೆ. ವಸಂತಕುಮಾರ್ | 6ನೇ ತರಗತಿ. |
| | | ಕು|| ಸಿ. ಶಿಲ್ಪಾಪ್ರಿಯದರ್ಶಿನಿ | 8ನೇ ತರಗತಿ. |
| 2. ಬಹುಮಾನ | 30 ಗ್ರಾಂ ರಜತ ಪದಕ | ಶ್ರೀ ಎಂ. ಮುರುಗ | 8ನೇ ತರಗತಿ. |
| | | ಕು|| ಕೆ. ಅರ್ಚನ | 6ನೇ ತರಗತಿ. |
| 3. ಬಹುಮಾನ | 25 ಗ್ರಾಂ ರಜತ ಪದಕ | ಶ್ರೀ ಎಸ್. ಮಧುಸೂದನರಾವ್ | 8ನೇ ತರಗತಿ. |
| | | ಕು|| ಸಿ. ಪಾವನೀದೇವಿ | 8ನೇ ತರಗತಿ. |

Published on behalf of T.T. Devasthanams by N. S. Ramamurthy, M.A., Editor and
Printed at T.T.D. Press, by P. Mohan Rao, Manager, T.T.D. Press, Tirupati - 517 507.

